ಕಂಡೆಂ ಕಣ್ಬಡೆದಿರ್ದುದರ್ಕೆ ಫಲಮೆಂಬಂತೀಗಳೊಂದೇಪೆ ಯಿಂ |
ಕಂಡೆಂ ಕಣ್ ದಣಿವಂತು ಸಂತಸದೊಳಾಂ ಶ್ರೀಗುಮ್ಮಟಾಧೀಶನಂ ||

**ಜಿನಸ್ತುತಿ** (ಪದ್ಯ 12). ಸು. 1300.

ಅಱಿಯದ ದೇಶದೊಳ್ ತೊಱಲಿ ತಳ್ತ ಮಹಾವಿಪಿನಾಂಧಕಾರದೊಳ್ |
ಸಱಿಗಳ ನಿರ್ಝರೋದಕದ ಗಹ್ವರದೊಳ್ ಭಯಮಾದ ಬೆಟ್ಟದೊಳ್ ||
ತೆಱಪಱಿದೊಲ್ದು ನಿಂದು ಮಿಗೆ ನಿರ್ಮಲಪಂಚಪದಾಕ್ಷರಂಗಳಂ |
ಮಱೆಯದೆ ಭಾವಿಪೊಂದು ಪರಮೋತ್ಸವಸಂಪದಮೆಂದು ಸಾರ್ಗುಮೋ ||

**ಧ್ಯಾನಲಕ್ಷಣ** (ಕಂದ 5). ಸು. 1300.

ತಾರಗೆಯುಂ ಕ್ಷೀರಾಬ್ಧಿಯ | ವಾರಿಯೊಳಿರದೊಱಸಿ ಕರ್ಚಿ ಕಳೆದವೊಲೆಸೆವಾ |
ಕಾರದ ಪಂಚಪದಂಗಳ | ನಾರಯ್ದತಿಶುದ್ಧಮನದೊಳಿರಿಸೆ ಪದಸ್ಥಂ ||

**ಪಂಚಪದಾಷ್ಟಕ**[1] (ಕಂದ 10). ಸು. 1300.

ಶ್ರೀಕರಮಭೀಷ್ಟಸಕಲಸು | ಖಾಕರಮಪವರ್ಗಕಾರಣಂ ಭವಹರಣಂ |
ಲೋಕಹಿತಂ ಮನ್ಮನದೊಳ | ಗೇಕಾಗ್ರದೆ ನಿಲ್ಕೆ ನಿರುಪಮಂ ಪಂಚಪದಂ||
ಸಾರಂಗಳ್ ಪಂಚನಮ | ಸ್ಕಾರಂಗಳ್ ಸಕಲಭವ್ಯಜನಹೃದಯಾಲಂ |
ಕಾರಂಗಳ್ ಶ್ರುತಲಕ್ಷ್ಮೀ | ಹಾರಂಗಳ್ ನೆನೆವವರ್ಗೆ ಸುಖಸಾರಂಗಳ್ ||

**ಯೋಗಾಮೃತ** (ಪದ್ಯ 110) ಸು. 1300.

ಸಮಚಿತ್ತಮೆ ಪರಮಪದಂ | ಸಮಚಿತ್ತಮೆ ಸಕಳಸುಖದ ನಿಳಯಂ ಮತ್ತಂ |
ಸಮಚಿತ್ತಮೆ ಮುಕ್ತಿಪದಂ | ಸಮಚಿತ್ತದೆ ಕೂಡಿ ನೆಗಳ್ದ ತಪಮದು ಸಫಲಂ ||

---

1. 1ನೆಯ ಸಂಪುಟದ 304ನೆಯ ಪುಟವನ್ನು ನೋಡಿ.

ಅಱಿಯದವರಱಿವರೊಳ್ ತಾ । ನಱಿವುದು ಪರಮಾತ್ಮಗುಣಮನಱಿವಿಂ ಕರ್ಮಂ ।
ಪಱಿಪಡುಗುಮಱಿಯದಿರ್ದೊಡೆ । ನೆಱೆಯಟ್ಟಿ ತಗುಳ್ದು ಸುತ್ತುತಿರ್ಕುಂ ಕರ್ಮಂ ॥

ಕಾನಲ ಬಾನಲ ನೀರಂ । ಮಾನೊಲ್ಲುಂ ರಾಜಹಂಸನೊಲ್ಲದ ಮಿಥ್ಯಾ ।
ಜ್ಞಾನಿ ಭವಸುಖಮನೊಲ್ವಂ। ತೇನೊಲ್ಲದು ಪರಮಪಾವನ ಜ್ಞಾನಪರಂ ॥

## ವೈದ್ಯಶಾಸ್ತ್ರ. ಸು. 1300.

ನೇಱಿಲ ಬೀಜಮಂ ಮೊಲೆವಾಲಿನಲ್ಲಿ ತೇದು ಕಣ್ಗೆ ಎಚ್ಚೆ ಕಣ್ಣುಬೇನೆ ಮಾಣ್ಗುಂ.

ಅರುಳಿಮೊಗರು ಅರಗು ಇವನರೆದು ಹುಳಿಮಜ್ಜಿಗೆಯಲ್ಲಿ ಕದಡಿ ಕುಡಿಯೆ ಸೂತಕಂ ನಿಲ್ಲುವುದು.

## ಜ್ವಾಲಿನೀಕಲ್ಪಾದಿಸಂಗ್ರಹ. ಸು. 1300.

ಗದ್ಯ ಪದ್ಯಾತ್ಮಕವಾಗಿದೆ.

ಕರಿಯೆಳ್ಳು, ಕರಿಯ ಕಡಲೆ, ಕರಿಯ ಕಾಕಿ, ಕರಿಯುಡಕೆ ಇನಿತುಮಂ ಸಮಂಗೊಂಡು ಎಳ್ಳೆಣ್ಣೆಯೊಳರೆದು ಮೆಯ್ಯಂ ಪೂಸೆ ಮೆಯ್ಯ ರೋಮಂ ಮೊದಲಾಗಿ ಏನುಂ ಬೇಯದು.

ಕನಕದ ಬೇರು ಗಿರಿಕರ್ಣಿಕೆಯ ಬೇರು ಸಹ ಕಪಿಲೆಯಾವಿನ ಬೆಣ್ಣೆಯಿಂದರೆದು ಮೆಯ್ಯ ಮೊಗಮಂ ಪೂಸಿ ನೀರೊಳ್ ಪೊಕ್ಕು ಕುಳ್ಳಿರಲು ಮನೆಯೊಳಿರ್ದಂತಿರ್ಕುಂ.

ಕಡಲೆಯ ಬೇರಂ ಸಿದ್ಧದಿನದಲ್ಲಿ ತಂದು ಮಂಚದಲ್ಲಿ ಕಟ್ಟಲು ತಿಗುಣೆ ಹೊದ್ದಲಮ್ಮದು.

ಕರಮಿದು ಚೋದ್ಯಂ ಕೆಂಗಿನ। ತಿರುಳಂ ಪಿಪ್ಪಲಿಯ ನೀರೊಳರೆದದನಿಂಬಾ ।
ಗಿರೆ ಪಿೞಿದು ತಳಿಯೆ ದುಗ್ಧಂ । ಸ್ವರೂಪಮಂ ತಳೆದು ಕರಮೆ ರುಚಿಯಾಗಿರ್ಕುಂ ॥

## ಕರ್ಮಪ್ರಕೃತಿ. ಸು. 1350.

ಕರ್ಮದ ಸ್ವರೂಪವನ್ನು ಹೇಳುವ ಗದ್ಯಗ್ರಂಥ.

ಕಿಚ್ಚಿಂದಂ ಬೆಂದೆರಡಾಗದ ನೀರಿಂದಂ ನನೆದೆರಡಾಗದ ಕೆಸಱಿಂದಂ ಲೊಪೆ

ದೆರಡಾಗದ ವಜ್ರಾದಿಗಳಿಂದೊಡೆದೆರಡಾಗದ ಕಡುಕಿಱಿದಪ್ಪ ಪುದ್ಗಲಮಂ ಪರಮಾಣುವೆಂಬುದು.

ಮೂಲಪ್ರಕೃತಿ ಜ್ಞಾನಾವರಣೀಯ ದರ್ಶನಾವರಣೀಯ ವೇದನೀಯ ಮೋಹನೀಯಾಯುಷ್ಯ ನಾಮಗೋತ್ರಾಂತರಾಯ ಭೇದದಿಂದೆಂಟುತೆಱಂ. ಅವಱೊಳ್ ಜ್ಞಾನಾವರಣೀಯಕರ್ಮಮಱಿಯಲೀಯದು ಆದಿತ್ಯಂಗೆ ಮಱೆಯಾದ ಮೇಘದಂತೆ. ದರ್ಶನಾವರಣೀಯಕರ್ಮಂ ಕಾಣಲೀಯದು ಸೊಡರಂ ಮುಚ್ಚಿದ ಕುಂಭದಂತೆ. ವೇದನೀಯಕರ್ಮಂ ಸುಖದುಃಖಂಗಳಂ ಮಾೞ್ಪುದು ಖಡ್ಗಧಾರೆಯ ಜೇನೆಯ್ಯಂ ನಕ್ಕುವಂತೆ. ಮೋಹನೀಯಕರ್ಮಂ ಮರುಳ್ಮಾೞ್ಪುದು ಮದ್ಯದ ಸೊರ್ಕಿನಂತೆ. ಆಯುಷ್ಯಕರ್ಮಂ ಶರೀರಮಂ ಪಿಡಿದಿರ್ಪುದು ಸಂಕಲೆಯಂತೆ. ನಾಮಕರ್ಮಂ ಪೆಸರ್ಗಳಂ ಮಾೞ್ಪುದು ಚಿತ್ರಕನಂತೆ. ಗೋತ್ರಕರ್ಮಂ ಕುಲಂಗಳಂ ಮಾೞ್ಪುದು ಕುಂಭಕಾರನಂತೆ. ಅಂತರಾಯಕರ್ಮಂ ವಿಘ್ನಮಂ ಮಾೞ್ಪುದು ಭಂಡಾರಿಯಂತೆ.

## ದ್ರವ್ಯಸಂಗ್ರಹಾಗಮಟೀಕೆ. ಸು. 1350.

ಶ್ರೀಮನ್ನೇಮಿಚಂದ್ರಸಿದ್ಧಾಂತವೇದಿಗಳ್ ಸ್ವಾತ್ಮಾನುಭವಜನಿತಾನಶ್ವರಾನಂತಸುಖಸುಧಾರಸಪಿಪಾಸಿತರಪ್ಪ ಭವ್ಯಜನಂಗಳ್ಗೆ ತತ್ಸುಖಪ್ರಾಪ್ತಿಕಾರಣಭೂತಪಂಚಾಸ್ತಿಕಾಯ ಷಡ್ದ್ರವ್ಯ ಸಪ್ತತತ್ವ ನವಪದಾರ್ಥ ಸಂಸಾರಮೋಕ್ಷಕಾರಣಪರಿಜ್ಞಾನಾರ್ಥಮಾಗಿ ಸಕಲಾಗಮಂಗಳ ಸಾರಮಂ ಸಂಗ್ರಹಿಸಿ ದ್ರವ್ಯಸಂಗ್ರಹಮಂ ಪೇೞುತ್ತದಱಾದಿಯಲ್ಲಿ ನಿರ್ವಿಘ್ನತಾದಿ ಚತುರ್ವಿಧಫಲಮನಪೇಕ್ಷಿಸಿ ವಿಶಿಷ್ಟದೇವತಾನಮಸ್ಕಾರಮಂ ಮಾಡಿದಪರ್.

## ತ್ರಿಭುವನಕೋಶ (ಗದ್ಯ) ಸು. 1400.

ಗಾಹೆಗಳೂ ಶ್ಲೋಕಗಳೂ ಅನುವಾದಮಾಡಲ್ಪಟ್ಟಿವೆ. ಆದ್ಯಂತಗಳಲ್ಲಿ ಈ ಕಂದವೂ ಗದ್ಯವೂ ಇವೆ—

ತ್ರಿಭುವನಚೂಡಾಮಣಿಜಿನ|ಶುಭಪಾದಪಯೋಜಯುಗಳಮಂ ವಂದಿಸಿ ಮ|
ತ್ತುಭಯಜಗದ್ಧಿತವೆನಿಸಿದ|ತ್ರಿಭುವನಕೋಶಸ್ವರೂಪಮಂ ವಿರಚಿಸುವೆಂ ||

ಇಂತೀ ಶ್ರೀಮದರ್ಹತ್ಪರಮೇಶ್ವರಪ್ರಣೀತ ಪರಮಾಗಮಸಾರಾಮೃತಾಬ್ಧಿಯೊಳೊಗೆದ ತ್ರಿಭುವನಕೋಶಮೆಂಬ ಗ್ರಂಥಂ ಸಮಾಪ್ತಂ.

## ಶಬ್ದಸಾರ. ಸು. 1400.

ಗದ್ಯರೂಪವಾದ ಕರ್ಣಾಟಕನಿಘಂಟು; 676 ವಾಕ್ಯಗಳಿವೆ.

ಜನ್ನವಗೆಯುಂ, ಎಂಟಡಿವರಿಜಂ, ಬೀರಂ, ಬಿಸುಗಣ್ಣಣುಗಂ, ಅರೆತಾನಿಸ ವಗೆಯುಂ—ಈ 5 ವೀರಭದ್ರಂಗೆ ಪೆಸರ್.

ಕಂದೆಂದುಂ ಕಜ್ಜೆಯೆಂದುಂ ಕಳಂಕಂ. ಜಕ್ಕುಳಮೆಂದು ಫೇನಂ. ಕಾಱ್ಪುರ ಮೆಂದು ಕಾಡ ಹೊಸಲ್.

## ಕಬ್ಬಿಗರ ಕೈಪಿಡಿ. ಸು. 1400.

ಹಳಗನ್ನಡಪದಗಳ ಅರ್ಥವನ್ನು ಕೊಡುವ ನಿಘಂಟು; ಕಂದವೃತ್ತಗ ಳಲ್ಲಿ ಬರೆದಿದೆ; ಪದ್ಯ 89.

ಪಂಡಿತನಕ್ಕಿ ಕೀರನೊಳೆ ತಾರಗೆವಟ್ಟೆಯೆನಲ್ಕೆ ಪುಷ್ಕರಂ |
ಕಂಡವೆನಲ್ಕೆ ತುಂಡಿನೊಳೆ ಬಣ್ಣವುರಂ ಮಿಗೆ ವರ್ಣಪೂರದೊಳ್ ||
ತಂಡವೆನಲ್ಕೆ ಹಿಂಡಿನೊಳೆ ದೂದವಿ ಕುಂಟಣಿಯೊಳ್ ಬೆದಂಡೆ ಸೈ |
ದಂಡಿಕನಾಮಧೇಯದೊಳೆ ಕನ್ನವುರಂ ಸಲೆ ಕರ್ಣಪೂರದೊಳ್ ||
ಪುಱ್ಱೆಯೆನಲ್ ಮುದ್ವಾನ್ನಂ | ಮಱ್ಱದನೆನೆ ಬಿಱ್ಱನಱ್ದಂ ಕೆಟ್ಟನೊಳಂ |
ನೊಱ್ಱದನೆನೆ ಪೊಡವಟ್ಟನೊ | ಘುಱ್ಱದನೆನೆ ಪ್ರೀತಿವಟ್ಟನೊಳ್ ತಳೆದಿರ್ಕುಂ ||

## ಚಿಕ್ಕ ಶ್ರಾವಕಾಚಾರ. ಸು. 1400.

ಜೈನಶ್ರಾವಕರಿಗೆ ಉಪದೇಶರೂಪವಾದ ಗ್ರಂಥ; ಕಂದವೃತ್ತಗಳು 164. ಕೆಲವು ಪದ್ಯಗಳು ಅನ್ಯಗ್ರಂಥಗಳಿಂದ ಅನುವಾದಮಾಡಲ್ಪಟ್ಟಿವೆ.

ಹೆಣ್ಣಿಂಗಂ ಹೊನ್ನಿಂಗಂ ಮಣ್ಣಿಂಗಂ ಕಾಂಕ್ಷೆಯಿಂದಮೆಱಗದೆ ಲೋಕಂ |
ಬಣ್ಣಿಸೆ ಸಂಚಳನಾಗದೆ | ತಿಣ್ಣಂ ನಡೆವವನೆ ತಾಂ ತಪೋಧನನಕ್ಕುಂ ||
ಪೆಂಡಿರ್ ತಾಯ ಸಮಾನಂ | ಹೊಂದದಸಮನರ್ಥಮೆಂದು ತೊಱೆದ ಬಱಕ್ಕಾ |
ಪೆಂಡಿಗ್ಗರ್ಥಕ್ಕಾಟಿಪ | ಭಂಡಂ ಸ್ವರ್ಗಾಪವರ್ಗಮಂ ಪಡೆದಪನೇ ||

ಕೊಲ್ಲದ ಪುಸಿಯದ ಕಳವಿನಿಂ ತಿಲ್ಲದ ಪರವನಿತೆಯಗ್ಗ್ರ ಪದಪಿಂ ಚಿತ್ತಂ।
ಸಲ್ಲದ ಪರಿಗ್ರಹಕ್ಕೆಳ । ಸಿಲ್ಲದ ಸುವ್ರತಮನವಯ್ದುಮಲ್ಲವೆ ರತ್ನಂ ॥
ನಿಟ್ಟೆಲು ಮುಱಿಯದಮುನ್ನಂ । ದಿಟ್ಟಿಗಳತ್ತಿತ್ತ ಸೂಸಿಪೋಗದಮುನ್ನಂ ।
ಕಟ್ಟಿಗೆವಿಡಿಯದಮುನ್ನಂ । ನೆಟ್ಟನೆ ನೀಂ ನಿನ್ನನಱಿದು ಭಾವಿಸು ಜೀವಾ ॥
ಆವಂಗಂ ಸಿರಿ ನಿಲ್ಲದು । ಭಾವಿಸುವೊಡೆ ಬಂಧುಜನತನಾಶ್ರಿತಜನಕಂ ।
ತಾವಾಗಿ ಕರೆದು ದಯೆಯಿಂ ದೀವುದು ನಿಜಕರಕೆ ಕರಕೆ ಬಾರದಮುನ್ನಂ ॥
ನೆರೆವುದಗಲ್ವುದರ್ಕೆ ಜನನಂ ಮರಣಕ್ಕೆ ವಿನೂತಯವ್ವನಂ ।
ಜರೆಗೆ ಧನಂ ದರಿದ್ರತೆಗೆನಲ್ಕೆ ವಿರಾಗಪಥಕ್ಕೆ ತಕ್ಕುದೋ ॥
ತ್ಕರಮಸುಖಕ್ಕೆ ಕಾರಣಮಿದೆಂದಱಿದುಂ ಭವಪಂಜರಾಂತರಾಂ ।
ತರಗತರೇಕೆ ಶೋಕಿಸುವರೇಕೆ ಪಲುಂಬುವರೇಕೆ ನೋವರೋ ॥

## ಧ್ಯಾನಲಕ್ಷಣ. ಸು. 1400.

ಮನವನೆತ್ತಲುಂ ಪರಿಯಲೀಯದೆ ಒಂದೆವಸ್ತುವಂ ಚಿಂತಿಸುವುದು ಧ್ಯಾನವೆಂಬುದು. ಆಧ್ಯಾನಂ ಆರ್ತಧ್ಯಾನಮುಂ ರೌದ್ರಧ್ಯಾನಮುಂ ಧರ್ಮಧ್ಯಾನಮುಂ ಶುಕ್ಲಧ್ಯಾನಮುಮೆಂದಿಂತು ನಾಲ್ಕುತೆಱನಪ್ಪುದು.

ಪರಮಾಗಮಪದಾರ್ಥದೊಳೆತ್ತಾನುಂ ಮಱವಿಯಾದೊಡೆ ನಯನಿಕ್ಷೇಪ ಪ್ರಮಾಣಂಗಳ್ಗೆ ವಿರೋಧಮಿಲ್ಲದಂತು ವಿಚಾರಿಸಿ ಸ್ಯಾದ್ವಾದಮತಾನುಸಾರಿಯಾಗಿ ಸ್ವಸಮಯಭೂಷಣಮುಂ ಪರಸಮಯದೂಷಣಮುಮೆಂದಿವನಱಿದು ಚಿಂತಿಸುವುದು ಕಾರಣವಿಜಯಮೆಂಬ ಪತ್ತನೆಯ ಧರ್ಮಧ್ಯಾನಮೆಂಬುದು. ಈ ಪತ್ತುತೆಱದ ಧರ್ಮಧ್ಯಾನಂ ಪೀತಪದ್ಮಶುಕ್ಲಲೇಶ್ಯಂಗಳನುಳ್ಳುವು ಸ್ವರ್ಗಮೋಕ್ಷಂಗಳ್ಗೆ ಕಾರಣಮಕ್ಕುಂ.

## ಮೋಹಾನುಭವಮುಕುರ. ಸು. 1400.

ಕಂದವೃತ್ತಗಳಲ್ಲಿ ಸ್ತ್ರೀವರ್ಣನೆ ; ಪದ್ಯ 114.

ಮಾನಿನಿಯರೊಳಗನಱಿವೊಡೆ । ದಾನವಮಥನಂಗೆ ಬಾರದದಱಿಂ ಪುರುಷರ್ ।
ಮಾನಿನಿಯರ ವಶಮೆಂತೆನೆ । ತಾನೇ ಘೃತಮಾಗಲಾರ್ಪುದೇ ನವನೀತಂ ॥
ಆನನಮುಂ ಚಂದಿರನೆಂ । ದಾನೆಯ್ದಲನಕ್ಷಿಗಳ್ಗೆ ಸಮಮೆಂದಳಕ ।
ಸ್ಥಾನಮನರೆವೆಱೆಗೆಣೆಯೆಂ । ದಾನೀಲಾಳಕಮನಳಿಗಳೆನೆ ಬಣ್ಣಿಸುವರ್ ॥

ಸಂದೆಯಂ ಕಳಿವಣಾಳ್ವರಾಕಲಿ ಪಂದೆಯೆಂಬಪ್ರೊಳಾಗಿಪರ್ |
ಸಂದ ಜಾನದ ಯೋಗಿಯುಂ ಚಲಚಿತ್ತವೃತ್ತಿಯನೆಯ್ದಿಪರ್ ‖
ನಿಂದೆವೊರ್ದದವರ್ಗೆ ತತ್‌ಕ್ಷಣದಿಂದೆ ನಿಂದೆಯುವೊರ್ದಿಪರ್ |
ಚಂದಿರಾನನೆಯುಕ್ಕಳಿಂತೆರಡಕ್ಕರ್ವೋಪಳೆ ಕಾರಣಂ ‖
ಮಿಸುನಿಗೆ ಕಂಪು ರತ್ನತತಿಗಿಂಪು ಸುರೂಪಕೆ ಸೊಂಪು ಕೋಮಲ |
ಪ್ರಸರಕೆ ನುಣ್ಪು ಸದ್ರಸಕೆ ತಣ್ಪು ಮಹತ್ವಕೆ ಗುಣ್ಪು ನಾಡೆ ರಾ ‖
ಜಿಸಲುತಿರವ್ಯಮಾದವೊಲನಂತಗುಣಾನ್ವಿತಮಾದ ಜೀವನ |
ಕ್ಕೆಸಿಯುಳ ಬೇಟವೊಂದು ದೊರೆಕೊಂಡೊಡೆ ಸಂಪದಮಾಗಿ ತೋಱುಗುಂ ‖

## ಲೋಕಸ್ವರೂಪ (ಗದ್ಯ). ಸು. 1400.

ಪರಮಜಿನಚರಣಕಮಳ | ಕ್ಕುರುಮುದದಿಂದೆಱಗಿ ಭವ್ಯಜನಹಿತಕರಮಂ |
ಪರಮುಕ್ತಿಕಾಂಕ್ಷೆಯಿಂದಂ | ಸುರುಚಿರಲೋಕಸ್ವರೂಪಮಂ ಪ್ರಕಟಿಸುವೆಂ ‖

ದುಷ್ಷಮಸುಷಮಮೆಂಬ ನಾಲ್ಕನೆಯ ಕಾಲದೊಳ್ ಕರ್ಮಭೂಮಿ ವ್ಯವಸ್ಥೆಯುಕ್ಕುಂ. ಅಲ್ಲಿ ಮೊದಲ ತೀರ್ಥಕರ ವೃಷಭನಾಥಂ ನಾಭಿರಾಜಂಗಂ ಮರುದೇವಿಗಂ ತ್ರಿಜ್ಞಾನಧರಂ ಪುಟ್ಟಿದಪ್ಪನೆಂದಿಂ ದ್ರಸಾಸನಕಂಪದಿಂದಱಿದು ಶ್ರೀ ಹ್ರೀಧೃತಿಕೀರ್ತಿಬುದ್ಧಿಲಕ್ಷ್ಮಿ ಮೊದಲಾಗೊಡೆಯ ದೇವಿಯರಂ ಸ್ವಾಮಿಯ ತಾಯ್ಗೆ ಬೆಸಕೆಯ್ಯಿಮೆಂದು ಪೇಳ್ದೊಡವರ್ ಬಂದು ಗರ್ಭಶೋಧನೆಯಂ ಮಾಡಿದ ನಂತರಂ ದೇವಿ ಶುಭಷೋಡಶಸ್ವಪ್ನಂಗಳಂ ಕಂಡಿಂ ಬೞಿಕ್ಕಂ ಸ್ವಾಮಿ ಸ್ವರ್ಗದಿಂ ಗರ್ಭಕ್ಕವತರಿಸೆಯುದನಿಂದ್ರನಱಿದು ಧನದಂಗೆ ನಿರೂಪಮಂ ಕುಡಲ್ ಹಿಂದೆಯಱು ದಿಂಗಳ್ ಮುಂದೆ ನವಮಾಸಪರ್ಯಂತಂ ನಿಚ್ಚನಿಚ್ಚಂ ಮೂಱುವರೆಕೋಟಿದ್ರವ್ಯಮಂ ಸುರಿವುದಱಿಂ ಹಿರಣ್ಯಗರ್ಭನೆಂಬ ಪೆಸರ್ ಭಟ್ಟಾರಕಂಗನ್ವರ್ಥಮಾದುದು. ಶುಭ ದಿನಶುಭಯೋಗ ಶುಭಮುಹೂರ್ತದೊಳುದಯಂಗೆಯ್ವಲೊಡಂ ಸೌಧರ್ಮೇಶಾನ ದೇವರ್ಕಳ್ ತಂತಮ್ಮ ವಿಭೂತಿಯಿಂ ಬಂದು ತಾಯಮುಂದೆ ಮಾಯಾಶಿಶುವ ನಿರಿಸಿ ಶಿಶುನಾಥನಂ ಮಂದರದ ಪಾಂಡುಶಿಲಾತಳದಮೇಲೆ ಪೂರ್ವಾಭಿಮುಖನಾಗಿರಿಸಿ ಕ್ಷೀರಾಬ್ಧಿಯ ನೀರಂ ತಂದಭಿಷೇಕಂಮಾಡಿ ಅರ್ಚಿಸಿಕೊಂಡು ಬಂದು ತಾಯ ಮುಂದಣ ಮಾಯಾಶಿಶುವಂ ತೆಗೆದು ಶಿಶುವನಿರಿಸಿ ಪೊಱಮಟ್ಟು ಪೋದರ್

## ಶಿವಾಕ್ಷರಮಾಲೆ. (ಕಂದ 44.) ಸು. 1400.

ಸಾವರ್ಣಾಂತವಿರಾಜ|ದ್ವೀವರ್ಣಮನಾಂತು ಹಸ್ತದೊಳ್ ಬಾಜಿಸೆ ನೀಂ|
ದೇವಗಣಂಗಳ್ ಮನದೊಳ್|ಭಾವಿಸಿ ವಿಸ್ಮಯಮನಾಂತರವನಿವಿಸೂತಾ||
ಭವದೂರನಾಗಿಯುಂ ನೀಂ | ಭವನಾದಪೆ ನಿನ್ನಭಕ್ತಜನತತಿಗೆಲ್ಲಂ |
ಭವಮಂ ಪಱಿದಿಟ್ಟು ಮಹೋ | ತ್ಸವಪದಮಂ ಕೊಟ್ಟೆ ಚರಣನತಸುತ್ರಾಮಾ||

## ಹರ್ಯಕ್ಷರಮಾಲೆ (ಕಂದ 39). ಸು. 1400.

ಪವನಹತಿಯಿಂದೆ ವಾರಿದ|ನಿವಹಂ ಪರೆವಂತೆ ದನುಜಬಲಮದು ರಾಮಾ|
ಹವದೊಳ್ ಪರೆದುದು ಪರನೃಪ | ಯುವತಿಗೆ ಕಣ್ಣಿಟ್ಟವರ್ಗೆ ಬಲಮವಗುಂಫಂ ||
ಹೊಬ್ಬಿನ ದನುಜನ ಬಿಲ್ಲಂ | ತಿಬ್ಬಂ ಮುಱಿದಸುವನಂತಕಂಗಿತ್ತು ಸುರ |
ಗ್ರ್ಗಬ್ಬನೆಸಗಿದನುದಾರಂ | ನಿಬ್ಬರದಿಂ ರಾಮದೇವಗಿವನೇಸುಜಂ ? ||

## ಶಿವಪ್ರಾರ್ಥನಾಶತಕ. ಸು. 1400.

ನೋಡಿ ನಲಿನಲಿದು ಭಕ್ತಿಯೊ | ಳಾಡಿ ಮನಂಬೆರಸು ಪಾಡಿ ಮೃಡನೊಳ್ ಚಿತ್ತಂ |
ಕೂಡಿ ಸುಖಜಲಧಿಯೊಳ್ ಮುಳುಗಿ | ಗಾಡಿ ಕರಂ ಲೀಲೆಯಿಂದಮೋದಿದರ್ಪೆನೋ ||
ಹರನ ದಯಾಮೃತವರ್ಷದ | ಸರಿವೊನಲಿಂ ನಾಂದುನಾಂದು ತನುಮನುಪೆಂಬು |
ವರಿ ದಣಿದು ಭಕ್ತಿಬೀಜಾಂ | ಕುರಮದು ತಾನೆಂದು ಬೆಳೆದು ಫಲವಾದಪುದೋ ||
ಬಾಲಂ ಜನನಿಯುಗಳ್ಗೆ | ನಾಲಗೆಗಿಟ್ಟೊಟ್ಟೆ ಕೆಱದಿಸಿರುಳುಂ ಪಗಲುಂ |
ನೀಲಗ್ರೀವನ ಪದಯುಗ | ದೋಲಗಕಾಂ ಬಾಲನಂತೆ ಮಱುಗಲ್ವೇಡಾ||

## ಶಾಂತಿಜಿನಾಷ್ಟಕ. ಸು. 1400.

ಫುಲ್ಲಶರನಿಕ್ಷುಚಾಪಮ | ನುಲ್ಲಂಘಿಸಿ ಕಳೆದು ಮೋಹಮಲ್ಲನ ಜೇರಂ |
ನಿಲ್ಲದೆ ಪಱೆದಿಹಾಡಿದ | ವಲ್ಲಭ ನೀಂ ಕರುಣಿಸೆನಗೆ ಶಾಂತಿಜಿನೇಂದ್ರಾ||

## ಪರಮಾಗಮಸಾರ. ಸು. 1400.

ಗದ್ಯರೂಪವಾಗಿದೆ. ಆರಂಭದಲ್ಲಿ ಮಾತ್ರ ವರ್ಧಮಾನಸ್ತುತಿರೂಪವಾದ ಒಂದು ಕಂದವಿದೆ.

ಶ್ರೀಯೆಂಬನಂತವಿದ್ಯಾ | ಶ್ರೀಯೆಂಬೀಯೆರಡು ಸೌಖ್ಯಹೇತುಗಳದಱಿಂ |
ಶ್ರೀಯುಮನನಂತವಿದ್ಯಾ|ಶ್ರೀಯುಮನೆಮಗೀಗೆ ವರ್ಧಮಾನಜಿನೇಂದ್ರಂ ||

ಆಗಮಾಭ್ಯಸಮಿಲ್ಲದ ಭವ್ಯಜನಂಗಳ್ಗೆ ಸಾಧುಸಂಬೋಧನಾರ್ಥಂ ಪರಮಾಗಮಸಾರಮನತಿಸಂಕ್ಷೇಪದಿಂ ಪೇೞ್ವೆಪರ್—ಇತ್ಯಾದಿ.

## ವಿರೂಪಾಕ್ಷಶತಕ. ಸು. 1410.

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಪದ್ಯ 136 ಪದ್ಯಗಳು ಪ್ರಾಯಿಕವಾಗಿ "ವಿರೂಪಾಕ್ಷ" ಎಂದು ಮುಗಿಯುತ್ತವೆ. ಗ್ರಂಥವು ವಿಜಯನಗರದ ರಾಜನಾದ 1ನೆಯ ದೇವರಾಯನ (1406—1416) ಕಾಲದಲ್ಲಿ ಹುಟ್ಟಿದೆ. ಇವನ ಪರಂಪರೆ ಹೀಗೆ ಹೇಳಿದೆ:—ಸಂಗಮ, ಮಗ ಹರಿಹರ, ತಮ್ಮ ಬುಕ್ಕ, ಮಗ ಹರಿಹರ, ತಮ್ಮ ವಿಕ್ರಮರಾಯ, ಮಗ ಬುಕ್ಕ, ಮಗ ದೇವರಾಯ. "ವಿದ್ಯಾನಗರವನಾಳುವ ದೇವರಾಯಂಗಾಯುವಿತ್ತು ಸಲಹು" ಎಂದು ಕವಿ ಹಲವು ಕಡೆ ಹೇಳುತ್ತಾನೆ. ಅಚ್ಚಾಗಿರುವ ಪರಂಪರೆಗೂ ಇಲ್ಲಿ ಕೊಟ್ಟಿರುವ ಪರಂಪರೆಗೂ ಸ್ವಲ್ಪ ವ್ಯತ್ಯಾಸವಿದೆ.

ಬಿಡುಜಡೆಯ ನಿಡುದಲೆಯ ಗಂಗೆಯ|ಕಿಡಿ ಸುರಿವ ನಡುನೊಸಲ ದೃಷ್ಟಿಯ|
ಜಡಿವ ಕುಂಡಲಿಗಿವಿಯ ನಾಸಾಪುಟದ ಚೆಲುವಿಕೆಯ ||
ಸಿಡಿವ ದಂತಚ್ಛವಿಯ ಕದಪುಗ|ಳೆಡೆಯ ಕಾಂತಿಯ ಮುಖದ ಹರ ಜಗ
ದೊಡೆಯ ನೀನೆನ್ನೊಡನೆ ನುಡಿಯೈ ಶ್ರೀವಿರೂಪಾಕ್ಷ ||
ಉತ್ತಮರುಣ್ಣರ ಕಂಡು ದುಃಖಿಸಿ | ಕೆಡುವೆ ಕೆಡುವರ ಕಂಡು ಸಂತಸ|
ಬಡುವೆನಕಟೆನ್ನಂತೆ ನೋಡೆನಿದೇನು ದುಷ್ಕೃತವೋ ||
ಮೃಡನೆ ಕೇಳೆನ್ನೊಡಲ ಕ್ಷುದ್ರವ | ಬಿಡಿಸಿ ಪರರಿಗೆ ಚಿಂತಿಸುವ ನಿ |
ಷ್ಪ್ರದಿಗಳನು ಬಿಡದಂತೆ ಮಾಡು ಮೃಡಾಣಿಯೊಡನಾಡಿ ||

### ಶಿವಾಕ್ಷರಮಾಲೆ. (ಕಂದ 44.) ಸು. 1400.

ಶಾವರ್ಣಾಂತವಿರಾಜ|ದ್ವಿವರ್ಣಮನಾಂತು ಹಸ್ತದೊಳ್ ಬಾಜಿಸೆ ನೀಂ|
ದೇವಗಣಂಗಳ್ ಮನದೊಳ್|ಭಾವಿಸಿ ವಿಸ್ಮಯಮನಾಂತರವನಿವಿನೂತಾ||

ಭವದೂರನಾಗಿಯುಂ ನೀಂ | ಭವನಾದಪೆ ನಿನ್ನಭಕ್ತಜನತತಿಗೆಲ್ಲಂ |
ಭವಮಂ ಪಱಿದಿಟ್ಟು ಮಹೋ | ತ್ಸವಪದಮಂ ಕೊಟ್ಟು ಚರಣನತಸು
ತ್ರಾಮಾ||

### ಹರ್ಯಕ್ಷರಮಾಲೆ (ಕಂದ 39). ಸು. 1400.

ಪವನಹತಿಯಿಂದೆ ವಾರಿದ|ನಿವಹಂ ಪಱಿವಂತೆ ದನುಜಬಲಮದು ರಾಮಾ|
ಹವದೊಳ್ ಪಱಿದುದು ಪರನೃಪ | ಯುವತಿಗೆ ಕಣ್ಬೆಳ್ಪವರ್ಗ್ಗ ಬಲಮು
ವಗುಂಫಂ ||

ಹೊಬ್ಬಿನ ದನುಜನ ಬಿಲ್ಲಂ | ತಿಬ್ಬಂ ಮುಱಿದಸುವನಂತಕಂಗಿತ್ತು ಸುರ |
ಗ್ಗರ್ಬ್ಬನೆಸಗಿದನುದಾರಂ | ನಿಬ್ಬರದಿಂ ರಾಮದೇವಗಿವನೇಸುಜಂ ? ||

### ಶಿವಪ್ರಾರ್ಥನಾಶತಕ. ಸು. 1400.

ನೋಡಿ ನಲಿನಲಿದು ಭಕ್ತಿಯೊ | ಳಾಡಿ ಮನಂಬೆರಸು ಪಾಡಿ ಮೃಡ
ನೊಳ್ ಚಿತ್ತಂ |
ಕೂಡಿ ಸುಖಜಲಧಿಯೊಳ್ ಮುಳು | ಗಾಡಿ ಕರಂ ಲೀಲೆಯಿಂದಮೋದಿದರ್
ಪೆಸರೋ ||

ಹರನ ದಯಾಮೃತವರ್ಷದ | ಸರಿವೊನಲಿಂ ನಾಂದುನಾಂದು ತನುಮನ
ಮೆಂಬು |
ವರೆ ದಣಿದು ಭಕ್ತಿಬೀಜಂ | ಕೊನರದು ತಾನೆಂಬು ಬೆಳೆದು ಫಲವಾ
ದಪುದೋ ||

ಬಾಲಂ ಜನನಿಯಗಲ್ಕೆಗೆ | ನಾಲಗೆಗಿತ್ತುೞ್ವಕೆಱದಿಸಿರುಳುಂ ಪಗಲುಂ |
ನೀಲಗ್ರೀವನ ಪದಯುಗ | ದೋಲಗದಿಂ ಬಾಲನಂತೆ ಮಱುಗಲ್ವೇಡಾ||

### ಶಾಂತಿಜಿನಾಷ್ಟಕ. ಸು. 1400.

ಫುಲ್ಲಶರನಿಕ್ಷುಚಾಪಮ | ನುಲ್ಲಂಘಿಸಿ ಕಳೆದು ಮೋಹಮಲ್ಲನ ಜೀರಂ |
ನಿಲ್ಲದೆ ಪಱಿದೋಡಿಸಿದ | ವಲ್ಲಭ ನೀಂ ಕರುಣಿಸೆನಗೆ ಶಾಂತಿಜಿನೇಂದ್ರಾ||

## ಪರಮಾಗಮಸಾರ. ಸು. 1400.

ಗದ್ಯರೂಪವಾಗಿದೆ. ಆರಂಭದಲ್ಲಿ ಮಾತ್ರ ವರ್ಧಮಾನಸ್ತುತಿರೂಪವಾದ ಒಂದು ಕಂದವಿದೆ.

ಶ್ರೀಯೆಂಬನಂತವಿದ್ಯಾ । ಶ್ರೀಯೆಂಬೀಯೆರಡು ಸೌಖ್ಯಹೇತುಗಳದಱಿಂ ।
ಶ್ರೀಯುಮನನಂತವಿದ್ಯಾ।ಶ್ರೀಯುಮನೆಮಗೀಗೆ ವರ್ಧಮಾನಜಿನೇಂದ್ರಂ ॥
ಆಗಮಾಭ್ಯಾಸವಿಲ್ಲದ ಭವ್ಯಜನಂಗಳ್ಗೆ ಸಾಧುಸಂಬೋಧನಾರ್ಥಂ ಪರಮಾಗಮಸಾರಮನತಿಸಂಕ್ಷೇಪದಿಂ ಪೇೞ್ವೆಂ—ಇತ್ಯಾದಿ.

## ವಿರೂಪಾಕ್ಷಶತಕ. ಸು. 1410.

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಪದ್ಯ 136 ಪದ್ಯಗಳು ಪ್ರಾಯಿಕವಾಗಿ "ವಿರೂಪಾಕ್ಷ" ಎಂದು ಮುಗಿಯುತ್ತವೆ. ಗ್ರಂಥವು ವಿಜಯನಗರದ ರಾಜನಾದ 1ನೆಯ ದೇವರಾಯನ (1406—1416) ಕಾಲದಲ್ಲಿ ಹುಟ್ಟಿದೆ. ಇವನ ಪರಂಪರೆ ಹೀಗೆ ಹೇಳಿದೆ:— ಸಂಗಮ, ಮಗ ಹರಿಹರ, ತಮ್ಮ ಬುಕ್ಕ, ಮಗ ಹರಿಹರ, ತಮ್ಮ ವಿಕ್ರಮರಾಯ, ಮಗ ಬುಕ್ಕ, ಮಗ ದೇವರಾಯ. "ವಿದ್ಯಾನಗರವನಾಳುವ ದೇವರಾಯಂಗಾಯುವಿತ್ತು ಸಲಹು" ಎಂದು ಕವಿ ಹಲವು ಕಡೆ ಹೇಳುತ್ತಾನೆ. ಅಚ್ಚಾಗಿರುವ ಪರಂಪರೆಗೂ ಇಲ್ಲಿ ಕೊಟ್ಟಿರುವ ಪರಂಪರೆಗೂ ಸ್ವಲ್ಪ ವ್ಯತ್ಯಾಸವಿದೆ.

ಬಿಡುಜಡೆಯ ನಿಡುದಲೆಯ ಗಂಗೆಯ।ಕಿಡಿ ಸುರಿವ ನಡುನೊಸಲ ದೃಷ್ಟಿಯ।
ಜಡಿವ ಕುಂಡಲಿಗಿವಿಯ ನಾಸಾಪುಟದ ಚೆಲುವಿಕೆಯ ॥
ಸಿಡಿವ ದಂತಚ್ಛವಿಯ ಕದಪುಗ । ಳೆಡೆಯ ಕಾಂತಿಯ ಮುಖದ ಪೆಂಪ ಜಗ
ದೊಡೆಯ ನೀನೆನ್ನೊಡನೆ ನುಡಿಯೈ ಶ್ರೀವಿರೂಪಾಕ್ಷ ॥
ಉತ್ತಮರುಮ್ಮರ ಕಂಡು ದುಃಖಿಸಿ । ಕೆಡುವೆ ಕೆಡುವರ ಕಂಡು ಸಂತಸ।
ಬಡುವೆನಕಟೆನ್ನಂತೆ ನೋಡೆನಿದೇನು ದುಷ್ಕೃತವೋ ॥
ಮೃಡನೆ ಕೇಳೆನ್ನೊಡಲ ಕ್ಷುದ್ರವ । ಬಿಡಿಸಿ ಪರರಿಗೆ ಹಿಂತಿಸುವ ನ ।
ಮ್ಮ ಗುಣಗಳನು ಬಿಡದಂತೆ ಮಾಡು ಮೃಡಾಣಿಯೊಡನಾಡಿ ॥

## ರಾಮನಾಥಶತಕ. ಸು. 1500.

ವೃತ್ತ 101 ; ಪ್ರತಿವೃತ್ತವೂ ಪ್ರಾಯಿಕವಾಗಿ “ ಗುರುಶಾಂತರಾಮನೇ ” ಎಂದು ಮುಗಿಯುತ್ತದೆ. ಆರಂಭದಲ್ಲಿ ಬಸವ, ಚೆನ್ನಬಸವ, ಅಕ್ಕ, ಅಲ್ಲಮ ಇವರುಗಳ ಸ್ತುತಿ ಇದೆ. ಕವಿಯ ಗುರು ವೀರಭದ್ರ.

ಮದನನ ಬಲ್ಪಿನುಬ್ಬಟೆಯನೇನನುಸಿರ್ದಪೆನೆನ್ನ ಚಿತ್ತದೊಳ್ ।
ಪುದಿದು ವಿವೇಕಮಂ ಜಡಿದು ಸತ್ಯಮನಿಕ್ಕಿ ಸುಶೌಚದೇಪೆಗ್ಗಯಂ ॥
ಸದೆಬಡಿದೊತ್ತಿ ಮೆಟ್ಟಿ ಕೊಳಚಾಡುತುಮಿಂತಿರೆ ನಿನ್ನೊಳಿರ್ಪವಂ ।
ಗಿದು ವಿಧಿಯೇ ಮಹಾತ್ಮ ಕರುಣಾಕರ ಸದ್ಗುರು ಶಾಂತರಾಮನೇ ॥
ಕಳವಳಿಸಿತ್ತು ಕಂಗೆಡಿಸಿದತ್ತು ಕರಂ ಕೊಳಚಾಡಿ ಕಾಡಿದ ।
ತ್ತಳಿಲಿಸಿದತ್ತು ಮುಂದುವರಿಸಿತ್ತು ಕರಂ ಮಳಹೆಂಬ ಕೂಪದ ॥
ಲ್ಲಿಳಿಯಿಸಿದತ್ತು ಮನ್ಮನಮನೀಯುಳಿಪಿಂತಿದನೊತ್ತಿ ಭಕ್ತನಂ ।
ಕುಳವನಚೈತ್ರ ನೋಡಿ ನಸೆ ರಕ್ಷಿಸು ಸದ್ಗುರು ಶಾಂತರಾಮನೇ ॥
ಸೇತುವನೆಯ್ದಿ ಪರ್ವತಮನೇಱಿ ಮಹಾವರವಾರಣಾಸಿಗಂ ।
ತಾತುರದಿಂದೆ ಸಾರ್ದು ಹಿಮವಂತಕೆ ಪೋಗಿ ಸಮಸ್ತದೇಶದೊಳ್ ॥
ಧಾತುಗಿಡಲ್ಕೆ ಮುಕ್ತಿದೊರೆಕೊಳ್ವುದೆ ಚಿದ್ಘನಲಿಂಗಪೂಜೆಯೊಳ್ ।
ಪ್ರೀತಿಯೊಳಿರ್ಪವರ್ಗ್ಗೆ ಘಟಿಸಿರ್ಪವೊಲೇಂ ಗುರುಶಾಂತರಾಮನೇ ॥

## ಶೀಘ್ರಕವಿದರ ಉದಯರಾಗ. ಸು. 1500.

ಪಕ್ಕಗಳ ಕೆದಱಿ ಪಂಜರದೊಳಿಹ ಪವಳವಾ ।
ಯ್ವಕ್ಕಿಗಳು ಪಂಚಪರಮೇಷ್ಠಿಗಳ ನಾಮಗಳ ।
ನಕ್ಕಱಿಂ ವಿವರಿಸುತ್ತಿವೆ ಕೇಳ್ವವರ ಕಿವಿಗೆ ಚಕ್ಕುಲಿಸುವಂತೆ ಮುದದಿ ॥
ದಿಕ್ಕನ್ನೆಯರ ಸುಪ್ರಭಾತ ಸ್ವಪ್ನಾವಳಿಯ ।
ಸಕ್ಕರೆಯ ಸಿಹಿಯ ಮಿಕ್ಕಿಸೆವ ಸಂಗೀತರಸ ।
ವುಕ್ಕಿ ಶೋಭಿಸುತಿಹುದು ಧರಣರಾಜನ ತೋಳ ತೆಕ್ಕೆಯಿಂದುಪ್ಪವಡಿಸಾ ॥

## ವೈದ್ಯಶಾಸ್ತ್ರ. ಸು. 1500.

ಸಂಸ್ಕೃತಶ್ಲೋಕಗಳಿಗೆ ಕನ್ನಡ ಟೀಕೆ. ಅಲ್ಲಲ್ಲಿ ಪದ್ಯಗಳೂ ಇವೆ.

ಪೊಸ ಎಳೆಯ ಪಣ್ಗಳೆಮಾ | ರಸಮುಂ ತೈಲಮುಮನಟ್ಟು ಕಿವಿಗೞೆ
ಯಲ್ ಪಾ |
ಟಿಸುಗುಂ ಪಲತೆಱದಿಂ ಪೀಡಿಸುವ ಮಹಾಕರ್ಣರೋಗಶತಸಂತತಿಯಂ ||
ಕಸುಕೆಜ್ಜನಾಗಿ ಪೋಪೊಡೆ | ಬಿಡದಾವಂ ಕಿಱಿದುಕಿಱಿದು ನಡೆವೊಡೆ
ನೊರೆಯುಂ |
ಪ್ಪೊಡೆ ನೊಂದು ಗುದಂ ಕೀಱುರಿ | ಪ್ಪೊಡೆ ತಿಳಿ ವಾತಾತಿಸಾರಮಾಗೆ
ವಿಕಾರಂ ||
ವರತಿರವಾರಾಂಜನಮುಂ | ನಿರತಂ ಘೃತದಿಂದೆ ಕೂಡಿಸೆ ಸತಿಯರ ಗರ್ಭಂ |
ಉರಿಗೊಡ್ಡಿದರಗಿನಂತಿರೆ | ಕರಗುಗುಮಾಸತಿಯ ಗರ್ಭಮಾಗದಮೋಘಂ ||

## ನೀತಿರಸಾಯನಶತಕ. ಸು. 1500.

ನುಡಿಯುಲೋಪಮಿದಿರಹೃದಯಂ | ಮಿಡಮಿಱಿಮಿಱುಕುವೊಡೆ ಬೇಱೆ ಕೊ
ಳ್ವೇಡವರಂ |
ನುಡಿನಿಂದೆಯುಕ್ಕುವಲ್ಲದೆ | ನುಡಿವೊಡೆಯುಪಪರಕೆ ಹಿತವ ನುಡಿವುದು
ಪುರುಷಂ ||
ತಲೆವಱಿದು ಮುನಿಯ ಚಿತ್ತಂ | ತಲೆವಱಿದುಂ ಕ್ರೋಧಮಾನಮಾಯಾ
ಲೋಭಂ |
ತಲೆವಱಿದುಪೋಗದಿರ್ದೊಡೆ | ತಲೆವಱಿದೊಂದಟ್ಟಿಯಾಡಿತೆಂಬವೊಲಕ್ಕುಂ ||
ನೀತಿರಸಾಯನಮೆಂತುಂ | ಪ್ರೀತಿಯ ಪುಟ್ಟಿಪುದು ಗುಣಿಗೆ ಗುಣಿಯಲ್ಲದವಂ |
ನೀತಿಯನೊಲ್ಲನದೆಂತೆನೆ | ಭ್ರಾಂತೇಂ ಜ್ವರಿತಂಗೆ ಪಾಲು ಪಥ್ಯಮೆ ಪೇೞಿಂ ||
ನಂದದ ನೊಡರಿದು ಸಹಜಾ | ನಂದದೆ ಬೆಳಗುವುದು ಸಕಳಕೇವಳ
ಬೋಧಾ |
ನಂದದೆ ಬೆಳಗುತ್ತಿರ್ಪುದಿ | ದೆಂದುಂ ಪರಮಾತ್ಮಜ್ಯೋತಿ ಲೋಕಕ್ಕೆಲ್ಲಂ ||

## ದೇವರಾಜವಲ್ಲಭಾಷ್ಟಕ. ಸು. 1500.

ಕಡಲ ತಡಿಯ ಕಾಣದೊಂದು ಖಗವು ಸುೞಿಯೊಳಿದ್ದದಂತೆ
ಮುಡಿದು ಮುಡಿದು ಪಂಚಕಡಲ ನಡುವೆ ನಾನು ಮುೞುಗಿದೆಂ ||

ಬಿಸದೆಯೆನ್ನ ಪುಣ್ಯಪಾಪವೊಡಲಸುತ್ತಿ ಬದ್ಧಗೆ । 
ಕಸಲ ತಡಿಯುನೆಯ್ಯಸೆನ್ನ ದೇವರಾಜವಲ್ಲಭಾ ॥

ಚಂದ್ರನಾಥಸ್ತುತಿ (ಪದ್ಯ 8). ಸು. 1500.

ಸಾವ ಪುಟ್ಟುವ ಚಿಂತೆಯಿಲ್ಲದೆ ಜೀವನಂ ನಿನಗೇಕಹಾ ।
ಜೀವ ಗೇಹದೊಳಿರ್ದು ಸೌಖ್ಯವ ಭಾವಿಸುತ್ತಿಹ ಮೂಢತ್ವಯಿಂ ॥
ಜಾವಜಾವಕೆ ನಿನ್ನ ಯಾಯುವ ನೀಂಟುವಂ ಜವನೆಂಬವಂ ।
ಭಾವಿಸೈ ಜಡನಿದ್ರೆಯುಂ ಬಿಡು ಭಾವಜಾರಿಜಿನಾಂಘ್ರಿಯುಂ ॥

ಅನಂತಜಿನೇಶ್ವರಾಷ್ಟಕ. ಸು. 1500.

ಫುಲ್ಲಬಾಣನ ಬಾಣಪುಷ್ಪಗಳೆಲ್ಲ ತುಂಬಿಗಳೆಂಬಿಲಂ ।
ದೊಲ್ಲದೇಳಿಸಿ ಒಲ್ಲರೆಲ್ಲರು ಸಿಜ್ಜ ಪೂಜಿಸುವಂತೆ ನಾಂ ॥
ನಿಲ್ಲದೇ ಸ್ತುತಿಯೆಂಬ ಸೌರಭ ಪೋಗದೀ ಪರಮಲ್ಲಿಕಾ ।
ಮಾಲೆಯುಂದದಿ ಪೂಜಿಪೆಂ ಶರಣಾಗನಂತಜಿನೇಶ್ವರಾ ॥

ಸಿದ್ಧಸ್ತೋತ್ರಟೀಕೆ. ಸು. 1500.

ಆಶಾಧರರ್ ಸಿದ್ಧಪರಮೇಷ್ಠಿಗಳ ಅಷ್ಟಗುಣಂಗಳಂ ಸ್ತುತಿಯಿಸುತ್ತು॥ ಮೊದಲೊಳ್ ಸಂಯಕ್ತ್ವಗುಣಮಂ ಸ್ತುತಿಯಿಸಿದಪರ್.

ಪಂಚಕಲ್ಯಾಣಸ್ತೋತ್ರಟೀಕೆ. ಸು. 1500.

ಅರ್ಹತ್ಪರಮೇಶ್ವರನ ಪಂಚಕಲ್ಯಾಣಂಗಳಂ ಸ್ತುತಿಯಿಸಲಿಚ್ಛೆಯಿಸುಳ್ಳ ಆಶಾಧರಸೂರಿಗಳ್ ಮೊದಲೊಳ್ ಗರ್ಭಾವತರಣಕಲ್ಯಾಣಮಂ ಸ್ತುತಿಯಿಸಿದಪರ್. ಅಥವಾ ಪ್ರತಿಮೆಯೊಳ್ ಪಂಚಕಲ್ಯಾಣಂಗಳನಾರೋಪಿಸಲಿಚ್ಛೈಸುವ ಆಶಾಧರರ್ ಮೊದಲೊಳ್ ಗರ್ಭಾವತರಣಕಲ್ಯಾಣಮನಾರೋಪಿಸಿದಪರ್.

ಅನ್ವಯಾರ್ಥಂ ಪೇಳಲ್ಪಡುಗುಂ; ಪದಚ್ಛೇದಮುಮಂ ಪದಾರ್ಥಮುಮನನ್ವಯಾರ್ಥದ ಸಾಮರ್ಥ್ಯದಿಂದಮೆ ಅಱಿವುದು.

ದ್ವಾದಶಾನುಪ್ರೇಕ್ಷೆ (ಗದ್ಯ) ಸು. 1500.

ಸಗರಾದಿಸ್ಥಾನಂಗಳುಂ ಪದವಿಗಳುಂ ಸಿಂಹಾಸನಾದಿಗಳುಂ ಪುತ್ರಕಳತ್ರಮಿತ್ರಾದಿಗಳೊಳಪ್ಪ ಪ್ರೀತಿ—ಇವು ಮೊದಲಾದುವು ಜೀವಕ್ಕೆ ನಿತ್ಯವಲ್ಲೆಂದು ಚಿಂತಿಸುವುದು ಅಧ್ರುವಾನುಪ್ರೇಕ್ಷೆ—ಇತ್ಯಾದಿ.

ವೀರಜಿನೇಶ್ವರಸ್ತುತಿ (ಪದ್ಯ 9). ಸು. 1500.

ನಿನ್ನ ನಾಮಮರೀಚಿಮಂಜರಿ ಕರ್ಣಭೂಷಣಮಾಗಿರೆ।
ನನ್ನ ಚಿದ್ಗೃಹದಿಂದ ಕತ್ತಲೆ ಪೋಗಲಾಕ್ಷಣಮಾಕ್ಷಣಂ ॥

ನಿನ್ನ ಸದ್ಗುಣರತ್ನರಾಶಿಯ ಕಂಡು ಸೋಲ್ತಿದೆ ಮುಕ್ತಿಯಂ।
ಮನ್ನಿಸಯ್ಯ ಮಹಾನುಭಾವನೆ ಸಂದ ವೀರಜಿನೇಶ್ವರಾ ॥

ಜ್ಞಾನಸಾರ. ಸು 1500.

ಪಲಪಲವನೋದಿ ಮನಸಂ । ಪೊಲೆಗೆಡಿಸದೆ ಕಿಱಿದಱಿದೆ ನಿಜತತ್ವಮುಮಂ।
ನೆಲೆಗೊಳಿಸಿದೊಡದೆ ಸಾಲದೆ । ಸಲೆ ಬೆಳಗುವ ಗಗನದಗಲಮೋ ರವಿಬಿಂಬಂ ॥

ಒರ್ವನೆ ನಿಜಶುದ್ಧಾತ್ಮನ।ನಿರ್ವಾಣಸುಖಕ್ಕೆ ಹೇತುವೆಂದಱಿಯದವಂ।
ನಿರ್ಗಂದದೆ ಮಾಳ್ಪ ತಪಂ।ಕರ್ವರೆ ಹೆಬ್ಬಿದಿರನಡಸಿ ತಿಂಬವೊಲಕ್ಕುಂ ॥

ಜೀವಕ್ಕೆ ಬಂಧಮೋಕ್ಷಂ। ಭಾವಂಗಳಿಸಕ್ಕುಮಲ್ಲಿ ಸಹಜಮೆ ಸಾರಂ ।
ಭಾವಿಸು ನಿನ್ನೊಳ್ ನೀಂ ಯ । ದ್ಭಾವಂ ತದ್ಭವತಿಯೆಂಬ ನುಡಿ ತಪ್ಪುವುದೇ ॥

ಪರಮಜ್ಞಾನಾನಂದ। ಸ್ವರೂಪನಾನೆಂದು ತನ್ನನಱಿವಬಱಿಕ್ಕಂ ।
ಪರವಸ್ತುವಿಗೆಱಗುವುದೇ । ಪಿರಿದುಂ ನಿಧಿಗಂಡು ಜತಗಗರ್ಚುವನೊಳನೇ ॥

ವೃಷಭಜಿನಸ್ತುತಿ (ಪದ್ಯ 8). ಸು. 1500.

ಮರದ ಮಡಕೆಯೊಳು ಪಾಕಮು। ನುರವಣೆಯಿಂ ಮಾಱಿಕ್ಪುಡಿಂತು ಸಂಸಾರಸುಖ।
ಕ್ಕಿರದಳಿಸಿ ಕೆಟ್ಟೆನಿನ್ನೆಗ । ಪರಮೇಶ್ವರ ರಕ್ಷಿಸೆನ್ನ ನೀಂ ಪರಮಜಿನಾ ॥

## ಪಾರ್ಶ್ವನಾಥಾಷ್ಟಕ. ಸು. 1500.

ಮುನ್ನ ಮಾಡಿದ ದುಶ್ಚರಿತ್ರದೆ ಹಿಂದೆ ಕೆಟ್ಟುದೆ ಸಾಲದೇ ।
ನಿನ್ನ ಭಕ್ತಿಯು ಪರ ಷ ಮುಟ್ಟಿದ ಲೋಹದಂದದೆ ಶುದ್ಧನಾಂ ॥

ನಿನ್ನ ಪಾದಸರೋಜಯುಗ್ಮದ ಸೇವೆಯುಂ ಬಿಡದಿರ್ಪೆನಾಂ ।
ನಿನ್ನ ರೂಪನೆ ಮಾಡು ಬೇಗದಿ ಪಾರ್ಶ್ವನಾಥ ಜಿನೇಶ್ವರಾ ॥

## ನಿರ್ಮಲರೂಪಸ್ತುತಿ (ಪದ್ಯ 25) ಸು. 1500.

ವಾತದ ಪಿತ್ತದ ಶ್ಲೇಷ್ಮದ । ಘಾತಿಯೊಳತಿಭೀತಿಯಾದ ದೇಹಕೆ ನೀನುಂ ।
ಓತು ನಿಜಗುಣವನೊಲ್ಲದೆ । ಕಾತರಮತಿಯಾಗಬೇಡ ನಿರ್ಮಲರೂಪಾ ॥

ಸುಂಬುಳಿನ ಸಳಿಗೆ ನಾಸಿಕ । ಬಿಂಬಾಧರ ತೊಗಲ ಸುರುಳಿಯುಲಗ್ಗಣ್ಣೊದಕಂ ।
ಬಂಬಲ್ಗುರುಳ್ಗಳು ಕಿಸುನಱ್ । ಪೊಂಬಲನುೞಿ' ಪೆಣ್ಣನೆಂದ ನಿರ್ಮಲರೂಪಾ ॥

## ನೋಂಪಿಗಳು. ಸು. 1500.

ಜೈನರ ವ್ರತಗಳನ್ನು ನಿರೂಪಿಸುವ ಗ್ರಂಥ; ಚಂಪೂರೂಪವಾಗಿದೆ.

ಕುವಲಯತತಿಹಿತಕರನಂ । ಸವಿವಿಲ್ಲನಕಣೆಯುಮುಱಿದ ವೀರಾಗ್ರಣಿಯುಂ ।
ಭವಭಯಹರನಂ ಸನ್ಮತಿ । ದಿವಿಜಾರ್ಚಿತಪಾದಪದ್ಮನಂ ವಂದಿಸುವೆಂ ॥

ಇಲಿಯುಂ ಕಪ್ಪೆಯುನೊಲವಿಂ । ದುಲಿದಟ್ಟಿ ತಗುಳ್ದು ತಿಂಬ ಪುತ್ತಿನ ಪುಱುವಂ
ಸಲೆ ನಾಗರೆಂದು ಪೂಜಿಪ । ರೊಲವಿಂ ಜನಮರುಳೊ ಜಾತ್ರೆಮರುಳೋ ಎನೆ ತಾಂ ॥

## ನಿರ್ದುಃಖಸಪ್ತಮಿಯಾಕಥೆ (ಗದ್ಯ). ಸು. 1500.

ಆರಂಭದಲ್ಲಿ ಈ ಕಂದವಿದೆ:—
ಜಿನಗೆಱಗಿ ಪೇೞ್ವೆನೊಲವಿಂ । ದನುಪಮನಿರ್ದುಃಖಸಪ್ತಮಿಯ ಸತ್ಕಥೆಯುಂ ।

ಜನತತಿಹಿತಮಂ ನುತಮಂ । ಜನನಜರಾಮರಣಹರಣಕಾರಣಮುದಱಂ॥

## ಧನ್ವಂತರೀಯ ನಿಘಂಟು. ಸು. 1500.

ಸಂಸ್ಕೃತ ಮೂಲಗ್ರಂಥದಲ್ಲಿ ಉಕ್ತವಾದ ಮೂಲಿಕಾದಿಗಳಿಗೆ ಕನ್ನಡದಲ್ಲಿ ಪ್ರತಿಪದಗಳು ಹೇಳಿವೆ.

## ಚಂದನೆಯ ಕಥೆ. ಸು. 1500.

ತ್ರಿಪದಿಯಲ್ಲಿ ಬರೆದಿದೆ; ಸಂಧಿ 4, ಪದ್ಯ 460. ಈ ಕಥೆ ಗುಣಭದ್ರಕೃತವಾದ ಉತ್ತರಪುರಾಣದಲ್ಲಿ ಉಕ್ತವಾಗಿದೆ. ಆದಿಯಲ್ಲಿ ಆದಿನಾಥ, ಸಿದ್ಧಾದಿಗಳು, ಸರಸ್ವತಿ ಇವರುಗಳ ಸ್ತುತಿ ಇದೆ.

ಕೆಡೆದಿರ್ದ ಸರ್ಪನ ಒಡಲ ಮೆಟ್ಟಲಿ ಹಸಿ। ದಡರುವ ಹುಲಿಯ ಹಿಡಿಯಲ್
ಪರಸು। ಕೆಡಲಾಡಬಹುದೆ ಕೆಳೆಯುಳೇ ॥

ಅಂಜೆನು ಸಿಂಹಕ್ಕೆ ಅಂಜೆ ಮಾತಂಗಕ್ಕೆ। ಅಂಜೆನಂಜಿಸುವ ಸಿಡಿಲಿಗೆ।
ಕಳೆಯುಳೆ। ಅಂಜುವೆ ಪರರ ನಿಂದೆಗೆ ॥

ಪರಧನ ಪರಸತಿ ಪರನಿಂದೆಗೆಣಿಸದಾ। ನರಮುಣಿಯಿಂದ ಮತ್ತೊಬ್ಬ।
ಪರಲೋಕಕೆ। ಗುರುವಿಲ್ಲವಿದು ಸಂಶಯವಲ್ಲ ॥

## ಶೃಂಗಾರಶಿವಸ್ತುತಿ. ಸು. 1500.

ನಾಲ್ದೆಸೆಗಳಂ ಬೆಳಪ ಮೊಲ್ಲೊದ್ದಿಗೆಯುಂ ತೊಡುತ
ದಲ್ದುಱುಬಿನಲ್ಲರೆಯರಲ್ದ ಪೊಸ ಪೂಮಂ ।
ಜೋಲ್ದುಗುವವೋಲ್ ಮುಡಿದು ಪಾಲ್ದೆರೆಗಳಂತೆಸೆವ
ಪೋಲ್ದುಗುಲಮಂ ಧರಿಸಿ ಕಾಲ್ದೆಗೆದು ಮುಂಬಾ ॥

ಗಿಲ್ದರೆಯ ಚಾವಡಿಗೆಯೋಲ್ದು ನಿಮ್ಮ ತಿ ಸೊಬಗ
ನೊಲ್ದು ಬಿಡದೀಕ್ಷಿಸುತೆ ಸೋಲ್ದವಳನೇ ಕಂ ।
ಡಾಲ್ದು ಮದನಂ ಕೆದದುರ್ವ ಬಿಲ್ದಿಯನುಬೀಸೆ ಬ
ಬಿಲ್ದವಳ್ಗೆ ಬಾಯ್ದೊಡು ಕುಕಿಲ್ದು ನೆರೆ ಶಂಭೂ ॥

ತುಂಬುರುಸುನಾರದಚುಂಬಿತಸುಗಾನರಸ
ದಿಂ ಬಿಡದೆ ಬಣ್ಣಿಸುವ ತುಂಬಿದ ತಪಃ ಪ್ರಾ |
ಡಂಬರ ಮಹಾಮುನಿಕದಂಬಮೆ ಸಹಸ್ರದಳ
ದಂಬುಜದ ಮಧ್ಯದೊಳಗಿಂಬಿಡುವ ಭಾಸ್ವ ||

ದ್ವಿಂಜಸುಫಲೋಷ್ಠಮೆಸೆವಂಬಿಕೆ ನೆಗಟ್ಟಿ ಮುದ
ದಿಂ ಬಿಗಿದು ತಟಿಕ್ಕೃಪ ಕಂಬೆಳಗ ಧಿವಾ? |
ಸಾಂಬಶಿವನಂ ನೆನೆಯೆ ಬೆಂಬಿಡದೆ ಬರ್ಪುದು ಸು
ಖಂ ಬಯಸಿದರ್ಥಮುಮಘಂ ಬಯಲದಲ್ತೇ ||

ಲಿಂಗಸ್ತೋತ್ರಷಟ್ಪದಿ. (ಪದ್ಯ 111). ಸು. 1500.

ತಿಂಗಳ ತಣ್ಗದಿಡೆರ್ಗಂಗಲ್ ತೀವಿದ | ಪಿಂಗಳವರ್ಣಜಟಾಕೋಟೀರದ |
ಮಂಗಳಮೂರ್ತಿ ಭುಜಂಗಾಭರಣ ವಿಹಂಗಗಮನವಿನುತ ||

ಗಂಗಾಧರ ಮಾತಂಗಾಸುರಹರ | ಪುಂಗವವಾಹ ಸಿತಾಂಗ ಸಮಸ್ತಜ |
ಗಂಗಳರಸ ಕೃಪೆಯಿಂ ಸಲಹೆಮ್ಮಂ ಸಂಗಮನಾಥ ಶಿವಾ ||

ಹುಟ್ಟಂ ಹಱಿರಂ ವಿನತಜನದ ದೆಸೆ|ಯುಟ್ಟಂ ನಿಟಿಲ್ವಿಡಲೆಲರಣಿವಚ್ಚಂ |
ದೊಟ್ಟಂ ಬಾನೊಳ್ ತಿರ್ರನೆ ತಿರ್ರನೆ ತಿರುಗುವ ಮುಪ್ಪೊಳಿಬಂ ||

ಸುಟ್ಟಂ ಕಟ್ಟುರಿಗಣ್ಣಿಂದು ಱಿ ಕುಳಿವೇಟ್ಟಿನಣುಗಿಗೊಲ್ದರಮೆಯ್ಯಂ ಸಲೆ |
ಕೊಟ್ಟಂ ದೇವರ ಹಿಂಚೊಳ್ ತನಗೆಣೆಗೆಟ್ಟಂ ಪಾಲಿಸುಗೆ ||

ಆಚರಣಸಂಬಂಧಷಟ್ಪದಿ (ಪದ್ಯ 165). ಸು. 1500.

ಹುರುಳಿಲ್ಲದ ವಿಷಯಂಗಳ ಬೆಸ್ಸೊಳು | ಹರಿಹರಿದೆಳತಟಗೊಳುತಿಹ
ರವರೇಂ |
ಜರಠವರಾತ್ಮಜರಲ್ಲವೆ ದಿಟ ಸತ್ಪುರುಷರೆ ಲೋಕದೊಳು ||

ಉರಗನ ಹೆಱಿಗೆಯನು ಕದ್ದೋಡಿದ | ಮುರುಳುವನಾಕಸತೆಱಿದಿಂ
ಹೊಳ್ಳನು |
ಹುರಿದರಳನು ಕಱಿ ಕುಪಸಂತಿಗನಱಿಯೆಂದಸು ದೇಶಿಗನು |

ಮಾಗದ್ವೈತನಿರಸನ ತ್ರಿಪದಿ. ಸು. 1500

ಪದ್ಯ 127 ಅಲ್ಲಲ್ಲಿ ಸಂಸ್ಕೃತಶ್ಲೋಕಗಳೂ ಅನುವಾದಮಾಡಲ್ಪಟ್ಟಿವೆ.

ಕರಿಯುಂಡಕಪಿತ್ಥ। ವಿರಲುಂಟುನೋಡುವರೆ । ತಿರುಳಿಲ್ಲವೆಂಬ ಮಾಟ್ಕ
ಯಿಂ। ಭಕ್ತರೊಳ । ಗಿರಲುಂಟೆ ಕರ್ಮಫಲ ಶೇಷ ॥

ಛೀಯೆಂದು ಪರಧನವ। ಛೀಯೆಂದು ಪರಸತಿಯ। ಛೀಯೆಂದು ಹಿಂಸೆ ಪಾಪ।
ಪೈಶುನ್ಯವನು । ಛೀಯೆಂದು ಕಳೆಯಲವ ಬ್ರಹ್ಮ ॥

ಬಸವೇಶ್ವರಸ್ತೋತ್ರ (ಕಂದ 16). ಸು. 1500.

ಪ್ರಣವದ ಬಳಿ ಬಕಾರಂ । ಪ್ರಣವದ ನಾದಾನುಸಾರಸಾರ ಸಕಾರಂ ।
ಪ್ರಣವದ ಬಿಂದು ವಕಾರಂ । ಪ್ರಣವಂ ಬಸವಾಕ್ಷರತ್ರಯಂ ಬಸವೇಶಾ ॥

ಬಸವಂ ಭಕ್ತಿಗೆ ಮೂಲಂ । ಬಸವಂ ಕಾಲಂಗೆ ಕಾಲನನುಪಮಶೀಲಂ ।
ಬಸವಂ ಜಂಗಮಲೋಲಂ । ಬಸವಾ ರಕ್ಷಿಸುವುದೆನ್ನ ಸಂಗನ ಬಸವಾ ॥

ಪಂಚಾಶಿಕೆ. ? 1528 (ಸರ್ವಧಾರಿ).

ಭಾಮಿನೀಷಟ್ಪದಿ; ಸಂಧಿ 13, ಪದ್ಯ 673. "ರಚಿಸುವೆನು ಸುರಪಗೆ ಪರಮಶಿವನುಪದೇಶಿಸಿದ ಪಂಚಾಶಿಕಾಗಮವ" ಎಂದು ಕವಿ ಹೇಳುತ್ತಾನೆ. ಆರಂಭದಲ್ಲಿ ಶಿವ, ಗೌರಿ, ತೋಂಟದ ಸಿದ್ಧಲಿಂಗ, ಗಣಪತಿ, ನಂದಿ, ವೀರೇಶ್ವರ, ಕುಮಾರ ಇವರುಗಳ ಸ್ತುತಿ ಇದೆ

ಪೊಕ್ಟ ಪೊಸಬಾಂಬೊಚ್ಚದಲೆಯುಂ । ಗಚ್ಚಱಿಯದೆನ್ಮಯ್ಯಂಪಂಗುಪೆ ।
ಮಚ್ಚರವನೊಂದದ ಸಿರಿಗಳೆಱಿಯುಂಗೆ ಬಗೆಯೊಳಗೆ ॥
ಬಿಚ್ಚಱಪ ಮುಱುಕದ ಜಸಂದಳೆ । ದೆಚ್ಚಱಿಡಗದ ದೇಸಿಗಂಗಾ ।
ನೊಚ್ಚತಂ ತುಱಿಲ್ಗೆಯ್ವೆನೊಡಲಿಜನೊಡಲ ಚುಚೀದಗೆ ॥
ಎನುತ ಭೇದಾಭೇದವಹ ಚಿತಿ । ಯನುಸರದೆ ಚಿತಿಯಾತ್ಮಕವಿಸೆಂ ।
ದೆಸಿಪ ಜಗವಾ ಚಿತ್ತೆ ಚಿತ್ತು ಜ್ಞಾನವದೆ ಧರ್ಮ ॥
ತನುಜ ಧರ್ಮಿಗೆ ಧರ್ಮಕಂ ಕೇ । ಳಿನಿಸುಮುಗಲಿಗೆ ತೋಱಿದನುವೆಂ ।
ತೆನಲು ಶರಧಿತರಂಗಸೀತಿಯೊಳಿಲ್ಲವೇಕತೆಯು ॥

ಬಸವೇಶ್ವರನ ಪಂಚಸ್ತೋತ್ರ. ಸು. 1550.

ಕುವಲಯಪರಾಜಿತಂ ಕಂಜಾತರಂಜಿತಂ ।
ತನೆ ತಾರಕಾಲಂಕೃತಂ ನಾಡೆ ಸಂತತಂ ।
ರವಿಯಂತೆ ಪುರದಂತೆ ವನದಂತೆ ದಿವದಂತೆ ಶಿವನಂತೆ ದನುಜನಂತೆ ॥

ವಿವಿಧಾನಿವಿಷಭಂಗವರ್ಧನಂ ಶ್ರುತಿಯುತಂ ।
ವಿವರಿಸಲ್ಕಂ ಜನೋದ್ಭಾಸಿತಂ ಬಕ ಸರಸಿ ।
ನವಗಾನ ವಿಪ್ರಕುಲ ಗಿರಿ ವರುಣನೆಸೆಯಂತೆ ಗಿರಿಜೆಯಂಬಕವೆಸೆದುವು ॥

ಪಲಗಣ್ಣ ಕಾರೊಡಲ ಮಾತುವೆಣ್ಣೆಱೆಯರುಂ ।
ತುಱುಗಲ್ಗೈವ ಮೆಲ್ಲಡಿಯ ಜತಿಗಳೆದೆವಕ್ಕಿಗನು ।
ಮುಲರಂಬವಗೆಯ ಸಿಂಗಗೈಯ ಜೊನ್ನೊಡಲ ಮರಗೂಱಿಬಾನ್ಮಣಿ
ಗಣ್ಣನು ॥

ಎಲವರ್ಣಟ್ಟಿದಲೆಯನಱಿವೊಗನಯ್ಯ ಸಜ್ಜೆಱೆಯ ॥
ನೆಲರುಣಿಸಗಂಕಣಂ ಪೊಂಬೆಟ್ಟಬಿಲ್ಗೈಯ
ನೆಲದಳೆದನಣುಗಿಯಾಣ್ಮಂ ಸಿದ್ಧನಂಜೇಶ ರಕ್ಷಿಸುಗೆ ಬಿಡದೆಮ್ಮನು ॥

ಭುವನಭವಭವವಿನುತ ಭುವನಭವನಯುಸನತ ।
ಭುವನಭವಭವನಭವ ಭುವನಧರದಳನಸವಿ ।
ಭುವನಭವಸಖಭುವನಭವರಿಪುವಸಲನಯನ ಗಗನಭುಪನಾವತಂಸ ॥

ಭುವನಧರಧರ ಕನಕಭುವನಧರಧರ ವರದ ।
ಭುವನಧರಗಜಶರದ ಭುವನಭವಶಿರ ಭುವನ ।
ಭುವನೇಶ್ವರಿಯ ವದನಭುವನೇಜ ಭುವನನಯನ ಜಯ ಜಯ ಸಿದ್ಧ
ನಂಜಾ ॥

ನೀಲಮ್ಮನ ತ್ರಿಪದಿ (ಪದ್ಯ 55). ಸು. 1550.

ಶ್ರೀ ಪರಮೇಶ್ವರನ । ಅಪಾರಮಹಿಮೆಯನು । ರೂಪುಗೊಂಡಂತೆ ನಿಂದ
ನೀಲಮ್ಮ । ನೀನೇಪೊತ್ತು ಎನಗೆ ಕೃಪೆಯಾಗು ॥
ಕರಗಿದಗೆ ಕಾಮದಲಿ । ಕೊರಗಿದಗೆ ಕ್ರೋಧಗಲಿ । ಬೆರೆದವಗನೇಕ
ಭವದೊಳಗೆ ।
ನೀಲಮ್ಮ । ಪರಿಪೂರ್ಣರೂಪೆ ಕೃಪೆಯಾಗು ।

ಮುರಿಗೆ ಶಾಂತವೀರೇಶ್ವರನ ಕಂದ (ಪದ್ಯ 24) ಸು. 1550.

ನಿನ್ನನೆ ಪಾಡುವೆ ಸಂತತ । ನಿನ್ನನೆ ಪೊಗಟ್ಟುವೆನು ನಿತ್ಯವೆಡೆ ಬಿಡದಾವಗ।
ನಿನ್ನನೆ ಬೇಡುವೆನಲ್ಲದೆ । ಯನ್ಯರ ಸಾನಟ್ಟೆಯೆನೀಶ ಶಾಂತವಿರೇಶಾ ॥

ಶಿವಭಕ್ತಸ್ತುತಿ (ಕಂದ ಸುಮಾರು 800). ಸು. 1550).

ಭಕ್ತರನಳವಿಯೊಳೀಕ್ಷಿಸಿ । ಭಕ್ತರ್ ಬಂದಪರೆನುತ್ತೆ ಬದುಕಿದೆನೆನುತಂ ।
ಭಕ್ತಗೀದಿರೆಟ್ಟಿ ಯಥಾ । ಶಕ್ತಿ ಸ್ಥಿತಿಯಿಂದೆ ಪೂಜಿಸಲ್ವೇಟ್ಕುಭವಾ ॥

ಕುಲಜಕುಲಹೀನರಿರ್ವರ್ । ನೆಲೆಗೊಳೆ ಭವದಚಲಭಕ್ತಿನಿಷ್ಠಾಗತಿಯಿಂ।
ಬೆಲೆಗೆಯ್ಯೊಡವರ್ ಸದೃಶರ್ । ಕುಲಜರ್ ಕುಲಹೀನರೆಂಬುದಘಟಿತವುವರೊಳ್ ॥

ಕೊಟಿತದ ಶಿರಂಗಳ್ ಬೆರೆಗುಂ । ಪಟ್ಟಿದಾಜಿಹ್ವೆಗಳುಟ್ಟುಯುದೆಬಕುಳಂ ।
ಕಟ್ಟಿಗೊರಲನ ಭಕ್ತಗ್ಗಿಂ । ದಟ್ಟುಯುರೆ ಸದ್ಯಃ ಪ್ರಸಾದರೀಶನ ಭಕ್ತರ್॥

ಮಿಶ್ರಸ್ತೋತ್ರ. ಸು. 1550.

ಕುಸುಮಷಟ್ಪದಿ; ಪದ್ಯ 110. ಕೊನೆಯ ಪದ್ಯದಲ್ಲಿ ಗುರುಸೋಮನಾಥನ ಅಂಕಿತವಿದೆ.

ನಂದಿಕೇಶ್ವರ ಭೃಂಗಿ । ಸ್ಕಂದ ಮುಖ್ಯಸುರಾಳಿ ।
ಬಂದೆನ್ನ ಹೃತ್ಕಮಲದೊಳಗೆ ॥
ನಿಂದು ನಿಮ್ಮಯ ಭೃತ್ಯ । ನೆಂದೀ ಕೃತಿಯೊಳು ತ ।
ಪ್ಪೊಂದಿಲ್ಲವೆನೆ ನಡೆಯಿಸುವುದು ॥
ಒಡಲ ಒಟ್ಟಿಯುಲಿ ಛಾಯೆ । ನುಡಿಯು ಬಟ್ಟಿಯೊಳಗರ್ಥ
ದೃಢಭಕ್ತಿಜ್ಞಾನಂ ವಿರಕ್ತಿ ॥
ಒಡನೆ ಸನ್ಮುಕ್ತಿ ಬೆಂ । ಬಿಡದವೋಲ್ ಮಹದೇವಿ
ನಡೆದಳಾ ಭೈರವನ ಕೂಡೆ ॥

## ಸುಗ್ರೀವನಿಮಿತ್ತ. ಸು. 1550.

ಮಂದನೊಡನಸುರಗುರುವುಂ । ಮಂದಸಿರಲ್ ನಿಂದ ನೆಲೆಯೊಳಿರೆ ಶುಭಮಕ್ಕುಂ ।
ಕುಂದದೆ ಪೊಱಮಡೆ ಕಲಹಂ । ಸಂದಿಸುಗುಂ ಕೇಡು ರುಜೆಗಳುಂ ಪೀಡಿಸುಗುಂ ॥

ಭೌಮನೊಡನಮರಗುರುವುಂ । ಸೋಮಜನುಮಿರಲ್ಕೆ ವೈರಿಬಲಮಂ ಗೆಲ್ಗುಂ ।
ಕ್ಷೇಮಾರ್ಥಲಾಭಮಕ್ಕುಂ । ಭೂಮೀಶ್ವರಪೂಜೆ ಸಂತತಂ ಪಿರಿದಕ್ಕುಂ ।

## ಸಾಮುದ್ರಿಕಲಕ್ಷಣ (ಗದ್ಯ). ಸು. 1600.

ಕಿಱುವೆರಳಿನ ಅಡಿಯು ಅಡ್ಡಲಾಗಿರ್ದುದು ಆಯುಷ್ಯರೇಖೆ. ಹೆಬ್ಬೆರಳಿನ ಒತ್ತಿನ ತರ್ಜನಿಯೆಂಬ ಬೆರಳ ಮುಟ್ಟಿದೊಡೆ ತೊಂಬತ್ತು ವರ್ಷದಾಯುಷ್ಯವೆಂದಱಿವುದು ; ತರ್ಜನಿಯುಂ ಸುತ್ತಿದೊಡೆ ನೂರುವರ್ಷದಾಯುಷ್ಯವೆಂದಱಿವುದು ; ಕಿಱುವೆರಳಿಂದ ಮಧ್ಯವೆರಳಲ್ಲಿ ನಡೆದು ನಿಂದೊಡೆ ಎಪ್ಪತ್ತು ವರ್ಷವೆಂದಱಿವುದು ; ಕಿಱುವೆರಳಿಂದ ಅನಾಮಿಕ ಮಧ್ಯವೆರಳಲ್ಲಿ ನಿಂದೊಡೆ ಅಱುವತ್ತು ವರ್ಷಕೆ ಕೊಱತೆಯಿಲ್ಲದೆ ಬಾಳ್ವರು

## ಶಕುನಗಳು. ಸು. 1600.

ಈ ಗ್ರಂಥದಲ್ಲಿ ಹಲ್ಲಿಯ ಶಕುನ, ಹಸುಬನ ಶಕುನ, ಗಾರ್ದಭಶಕುನ, ಸರ್ಪಶಕುನ, ಸೀನಿನ ಫಲ, ಕಣ್ಣುಹಾರಿದ ಫಲ, ಗೌಳಿ ಬಿದ್ದ ಫಲ, ಜೇನು ಇಕ್ಕಿದ ಫಲ, ಸ್ವರ ಮುಂತಾದ ಅನೇಕ ವಿಷಯಗಳು ಗದ್ಯಪದ್ಯಗಳಲ್ಲಿ ಹೇಳಿವೆ. ಕೆಲವು ಪದ್ಯಗಳು ವರಕವಿಚಂದ್ರ, ಅಲ್ಲಚಮೂಪ, ಅಚಳಿತವಚನ ಎಂದು ಮುಗಿಯುತ್ತವೆ.

ಕಾಗೆ ನರಿ ಪಲ್ಲಿ ಪಿಂಗಳಿ । ಗೂಗೆ ಹಯಂ ಖರದ ಶಕುನ ವೃಷಭಧ್ವನಿಯುಂ ।
ಪೋಗಲೆಡಬಲದೊಳಾಗಲು । ಮೇಗೆ ಕರಂ ಕಾರ್ಯಸಿದ್ಧಿಯಚಳಿತವಚನಾ ॥
ಆಪತ್ತುಪುಟ್ಟಿ ಮನದೊಳ್ । ತಾಪಿಸಿ ನಷ್ಟಕ್ಕೆ ಬಂದು ಬೆಸಗೊಳುತಿರಲುಂ ।

ಪಾಪಗ್ರಹದೊಳಗುಳಿಯಲು | ಆಪತ್ತುಗಳಡಗಿ ಮುಂದೆ ಸಂಪದಮಕ್ಕುಂ ||
ಗಂದವ ಸೀಡುವ ಪದದೊಳ್ | ಮುಂದಮೆ ಕನ್ನಡಿಯ ಹಿಡಿದು ನೋಡುವ ಪದದೊಳ್ |
ಚಂದವಲಿ ಪಲ್ಲಿ ಕರೆಯಲ್ | ಸಂದೇಹಮೆ ಶುಭದನೊಂದನಲ್ಲಜಮೂಪಾ ||
ಚಿಂತೆಗೆಯಿದಿರುಂ ಬಲನುಂ | ಸಂತೋಷಕೆಯೆಡನು ಬೆನ್ನಮಾದೊಡೆ ಶುಭದಂ |
ಚಿಂತೆಗೆ ಬ್ರಹ್ಮಸ್ಥಾನಂ | ಚಿಂತೆಗೆ ನೊಸಲಪಲ್ಲಿಯೊಸಗೆಯ ಪೇಳ್ಗುಂ ||
ಹರ ಮುನಿದಂಬಂ ತೊಟ್ಟೊಡೆ | ಶರಧಿಯ ನಡುಮಧ್ಯದೊಳಗೆ ಬಿದ್ದೊಡೆ ಮುತ್ತು |
ಮುರರಿಪು ಚಕ್ರದೊಳಿಟ್ಟೊಡೆ | ಪರಿಹರಿಪುದು ಬಲದಪಲ್ಲಿಯುಲ್ಲಜಮೂಪಾ ||
ನಾಡಲಿ ವಲ್ಲಿ ಪಾಳಿಯಿಡುವಲ್ಲಿ ಕದಂಗುಡುವಲ್ಲಿ ಚಿಂತೆಯಿಂ |
ಮೂಡಿ ಮುಳುಂಗುವಲ್ಲಿ ಸಭೆಯೊಳ್ ಸಿಲುಕಿರ್ದಡೆಯಲ್ಲಿ ಭೀತಿಯಿಂ ||
ದೋಡುವ ತಾಣದಲ್ಲಿ ಸಲೆ ಪಕ್ರಿಯನೊಂದೆಡೆಯಲ್ಲಿ ಕಲ್ಲಿಗಳ್ |
ನಾಡೆ ಗೃಹಂಗಳಿಂ ಪೊಱಗೆ ದಕ್ಷಿಣದೊಳ್ ಸ್ವರಮೀಯಲುತ್ತಮಂ ||
ಬಡತನದಿಂ ಪೋಪಾತಗೆ | ಯೆಡದಿಂ ಬಲಗಡೆಗೆ ಬಂದು ಪನ್ನಗರಾಜಂ |
ಪೆಡೆಯೆತ್ತಿ ಮುಂದೆ ನಿಲ್ಲಲ್ | ಪೊಡವಿಗೆ ತಾನೊಡೆಯನಕ್ಕುಮಿದೆ ಸಿದ್ಧಾಂತಂ ||
ಅಂಬಿಲದ ಕೂಳಿ ಮಡಕೆಯ | ತುಂಬಿದ ನಡುಮನೆಯ ಕಡೆವ ಕಂಬಗಳೆಡೆಯೊಳ್ |
ಹೊಂಬಣ್ಣದಿಱುಪೆ ನೆಗಬ್ದೊಡೆ | ತುಂಬಿದ ಧನಧಾನ್ಯಮಕ್ಕುಮಾತನ ಮನೆಯೊಳ್ ||

ಗೌಳಿ ಬಿದ್ದ ಫಲ—ನೆತ್ತಿಯಮೇಲೆ ಬೀಳೆ ಕಲಹ; ನಡುನೆತ್ತಿಯಮೇಲೆ ಬೀಳೆ ತಂದೆತಾಯಿಗೆ ಹೊಲ್ಲ; ಇತ್ಯಾದಿ.

ಅಂಗಸ್ಪರ್ಶಫಲ—ಮೂಗ ಹಿಡಿದಡೆ ಹಾನಿ; ಮುಖವ ಹಿಡಿದಡೆ ಲಾಭ; ಮಿಾಸೆಯ ಹಿಡಿದಡೆ ಪುರುಷಾರ್ಥ; ತುಟಿಯ ಮುಟ್ಟಲು ಜಗಳ; ಗಲ್ಲವ ಮುಟ್ಟಲು ದುಃಖ; ಮುಂಗೈಯ ಹಿಡಿದಡೆ ರೋಗ; ಇತ್ಯಾದಿ.

ಅವಯವ ಹಾಱಿದ ಫಲ—ಎಡದ ಹುಬ್ಬು ಹಾಱಲು ಕಷ್ಟ; ಬಲದ

ಹುಬ್ಬು ಹಾರಲು ಲಾಭ ; ಬಲದ ಅಳ್ಳೆ ಹಾರಿಲು ಸಂಪತ್ತು ; ಎಡದ ಅಳ್ಳೆ ಹಾರಿಲು ವಿಪತ್ತು ; ಇತ್ಯಾದಿ.

ಕಾಗೆ ಹೆಜ್ಜೆಯಿಕ್ಕಿದ ಫಲ—ಶಿರದೊಳು ಮೃತ್ಯು ; ಲಲಾಟದೊಳು ಕನಕಪಟ್ಟ ; ಉರದೊಳು ಭೋಜನ; ಕರ್ಣದೊಳು ಸುವರ್ಣಲಾಭ ; ಇತ್ಯಾದಿ

## ನೀಲಾಂಬಿಕಾಸ್ತುತಿ. ಸು. 1600.

ಬಸವನ ಹೆಂಡತಿ ನೀಲಮ್ಮನ ಸ್ತುತಿರೂಪವಾದ ಗ್ರಂಥ ; 25 ಷಟ್ಪದಿಗಳಿವೆ.

ಮಂಜುಮಣಿಗಣಖಚಿತನೂಪುರ । ರಂಜಿತಾಮಳಚರಣಸರಸಿಜೆ ।
ಕಂಜಮುಖಿ ಕಮನೀಯಮಂತ್ರಾಲಾಪೆ ಜಿತತಾಪೆ ॥
ಕಂಜರಿಪುನಿಭನಖನಿಚಯೆ ಮದ । ಕುಂಜರಾಧಿಕಯಾನೆ ದುರ್ಗುಣ ।
ಭಂಜೆ ಪಾಲಿಸು ಭಕ್ತಜಗವನು ವೃಜಿನಸಂಹಾರೆ ॥
ನೋಡಿ ನಿನ್ನಯ ದಂತಚಯಮಂ । ದಾಡಿಮಂಗಳು ನಾಚಿ ವನದೊಳು ।
ಕೂಡಿ ಸೈವೆರಗಾಗಿ ಬಾಯಂ ತೆರೆದು ಪಲ್ಗಿರಿದು ॥
ಬೇಡಿದವುವಾವಾಗ ನಿನ್ನೊಳು । ಗಾಡಿಯುಂ ಬಹುಮಾನಿ ದಯೆಯಂ ।
ಸೂಡಿ ಪಾಲಿಸು ನೀಲಲೋಚನೆಯೆಮ್ಮನನವರತ ॥

## ಮಣ್ಣೇಶ್ವರಕಾವ್ಯದ ನಾಂದ್ಯ. ಸು. 1600.

ಇವು ಈ ಕಾವ್ಯದ ಸಂಧಿಗಳ ಆದಿಯಲ್ಲಿರುವ ನಾಂದೀಪದ್ಯಗಳಾಗಿರಬಹುದು. ಒಗಟೆಗಳಂತಿರುವ 13 ಪದ್ಯಗಳಿವೆ. ಇವಕ್ಕೆ ಒಂದು ವ್ಯಾಖ್ಯಾನವೂ ಇದೆ.

ನಾಸಿಕದುಂಬನ । ಗಾಸಿಗೈದವನ ಛೇ । ದಿಸಿದನಂಗನೆಯ ಪಿತನಾ ।
ಸೂಸದುಂಡವಗೆ ವಂ । ದಿಸಿದಾತಗೆಯಾದಿ । ವಾಸವಾಗಿಹ ಮಣ್ಣೇಶ
ಮಾಂ ತ್ರಾಹಿ[1] ॥

---

1 ನಾಸಿಕದುಂಬನ - ಆನೆಯ, ಗಾಸಿಗೈದವನ - ಮೊಸಳೆಯ, ಛೇದಿಸಿದನ - ವಿಷ್ಣುವಿನ, ಅಂಗನೆಯ - ಲಕ್ಷ್ಮಿಯ, ಪಿತನ - ಸಮುದ್ರನ, ಸೂಸದುಂಡವಗೆ - ಅಗಸ್ತ್ಯನಿಗೆ, ವಂದಿಸಿದಾತಗೆ - ವಿಂಧ್ಯಕ್ಕೆ, ಆದಿ - ಮೇರು.

ಸರಸಿಯ ಪೊಕ್ಕನ ತಾಯ | ವರನಣುಗನ ರಕ್ತ | ಸುರಿದನಯ್ಯನ ವಾಜಿ
ಯುುರನಿಗೆ |
ಅರಿಸುತೆಯರಸನ | ವರಭಾವನ ಸೊಸೆಯ ಮೂ | ಗರಿದನಯ್ಯನೆ ವಾಣ್ಣೋ
ಶ ಮಾಂ ತ್ರಾಹಿ[1] ||

ಮನೋವಿಕಾರ ಸಿರಸನ ರಗಳೆ. ಸು. 1600.

ನುಡಿ 127 ; ಒಂದೊಂದೂ " ಶಂಕರಲಿಂಗ " ಎಂದು ಮುಗಿಯುತ್ತದೆ.

ಏರಿ ನೀರುಣ್ಬೊಡಂ ಬೇಲಿ ಕೆಯ್ಮೇವೊಡಂ |
ಆರದಂ ಮಾಣಿಸುವರಯ್ಯಾ ಶಂಕರಲಿಂಗ ||
ಅಟ್ಟಡಿಗೆಯಂ ಮಡಕೆ ಕದ್ದುಣ್ಬೊಡಂತದಕೆ |
ಕಟ್ಟಣೆಯ ಮಾಱಿ ಪ್ಪರಾರಯ್ಯ ಶಂಕರಲಿಂಗ ||
ಪಶು ಕಣ್ಣಿಯೊಳು ಕಟ್ಟುವಡೆದಂತೆ ನಿಮ್ಮ ಪದ |
ಬಿಸರುಹದೊಳೆನ್ನ ಕಟ್ಟಯ್ಯ ಶಂಕರಲಿಂಗ ||
ಕೋಟಿಹುಲುಮೊಱಡಿಗಳು ಕೂಡಿ ಮೇರುವಿಗೆ ಸಮ |
ಸಾಟಿಯಹುವೇ ನುಡಿಯಲಮ್ಮ ಶಂಕರಲಿಂಗ ||

ಪುನರ್ದೀಕ್ಷೆರಗಳೆ, ಪುಷ್ಪದಷ್ಟಕ ಇವುಗಳಲ್ಲಿಯೂ ಶಂಕರಲಿಂಗ ಎಂಬ ಅಂಕಿತವಿರುವುದರಿಂದ ಇವೆಲ್ಲವೂ ಏಕಕವಿರಚಿತವೆಂದು ತೋರುತ್ತದೆ.

ಪುನರ್ದೀಕ್ಷೆರಗಳೆ.

ಗುರುವ ಲಘುವೆನಬಹುದೆ ಲಘುವ ಗುರುವೆನಬಹುದೆ |
ಗುರುವೆ ಗುರು ಲಘುವೆ ಲಘುವೆನುತಿಹ ಪುನರ್ದೀಕ್ಷೆ ||

---

1 ಸರಿಸಿಯುಪೊಕ್ಕನ - ಕೌರವನ, ತಾಯ ಗಾಂಧಾರಿಯ, ವರನ - ಧೃತರಾಷ್ಟ್ರನ, ಅಣುಗನ - ದುಶ್ಶಾಸನನ, ರಕ್ತಸುರಿದನ - ಭೀಮನ, ಅಯ್ಯನ - ವಾಯುವಿನ, ವಾಜಿಯುುನಿಗೆ - ಹುಲ್ಲೆಯ ಎದೆಯಲ್ಲಿ ಉಳ್ಳ ಚಂದ್ರನಿಗೆ, ಅರಿಸುತೆಯ - ಸರ್ಪದಮಗಳ, ಅರಸನ - ಅರ್ಜುನನ, ವರಭಾವನ - ಕೃಷ್ಣನ, ಸೊಸೆಯ - ಸರಸ್ವತಿಯ, ಮೂಗರಿದನ - ವೀರಭದ್ರನ, ಅಯ್ಯನೆ - ಶಿವನೆ.

## ಪುಷ್ಪದಷ್ಟಕ (ಪದ್ಯ 17).

ಕರಿಯ ಮರುಗಂ ಬಿಳಿಯ | ಮರುಗ ಮುಡಿವಾಳದಿಂ |
ಪರಿಮಳದ ಪಾದರಿಯ ಪುಷ್ಪದಿಂದ ||
ಸುರಗಿ ಸುರಹೊನ್ನೆ ಹೊಂ | ಗೇದಗೆಯ ಪುಷ್ಪದಿಂ |
ಕರುಣಸಾಗರನ ಪೂಜಿಸುತಿರ್ಪೆನು ||

## ಘೋರಾಸುರಯುದ್ಧ. ಸು. 1600.

ವಾರ್ಧಕಷಟ್ಪದಿ; ಸುಮಾರು 1?00 ಪದ್ಯಗಳಿರುವಂತೆ ತೋರುತ್ತದೆ ಸಂಧಿಗಳ ಕೊನೆಯಲ್ಲಿ ಅವಿರಳಸಿದ್ಧಲಿಂಗೇಶನ ಅಂಕಿತವಿದೆ.

ಭರದಿಂದೆ ತೋಱುವಾವರ್ತದಿಂ ವೃತ್ತದಿಂ |
ದಿರದೆ ನಭಕೇಱುವ ಸೀರ್ಪನಿಗಳಿಂ ದನಿಗಳಿಂ |
ಹರುಷದಿಂ ತಿರುಗುತಿಹ ನಕ್ರದಿಂ ಚಕ್ರದಿಂ ಘನತರದ ಮತ್ಸ್ಯಂಗಳ ||
ಪರಿಪರಿಯ ನಟನೆಗಳ ಚಂದದಿಂದಂದದಿಂ |
ಸ್ಫುರಿಸುತಿಹ ಮೌಕ್ತಿಕದ ಮಣಿಗಳಿಂ ಗಣಿಗಳಿಂ |
ದೊರೆಯಲೇಂ ವಿದ್ರುಮದ ಗುಂಪಿನಿಂ ಸೊಂಪಿನಿಂದಂ ಪಯೋನಿಧಿಯೆಸೆದುದು ||

## ಅಸಂಖ್ಯಾತರಗಳೆ. ಸು. 1600.

ಪುರಾತನರ ಸ್ತುತಿರೂಪವಾದ ಗ್ರಂಥ; ನುಡಿ 138. ಕೊನೆಯ ಕಂದದಲ್ಲಿ ಗುರುಪುರದ ಮಲ್ಲಿನಾಥಪ್ರಭುವಿನ ಅಂಕಿತವಿದೆ.

ಒತ್ತಿ ಸಂಸಾರಮಂ ಕಿತ್ತು ಸದ್ಭಕ್ತಿಯಂ |
ಬಿತ್ತರದಿ ವೇಱೆದ ಮೊಲ್ಲೆಯ ಬೊಮ್ಮನಾಳಯ್ಯ ||

## ಬಸವಪವಾಡದ ರಗಳೆ. ಸು. 1600.

ಬಸವನ 88 ಪವಾಡಗಳ ವರ್ಣನೆ; ನುಡಿ 112 ಆದ್ಯಂತಗಳಲ್ಲಿ ಹಂಪೆಯ ವಿರೂಪಾಕ್ಷನ ಅಂಕಿತದ ಕಂದಗಳಿವೆ.

ಮೃಡನ ಶರಣ ಬೊಮ್ಮಿತಂದೆ ಕಣ್ಣಪಕ್ಕಿ ನೃಪನು ಸೆಣಸೆ |
ಒಡನೆ ಮಣ್ಣರಾಸಿಗಳನು ಚಿನ್ನಮಾಡಿ ಮೆಱೆದ ಬಸವ ||

## ಎಲ್ಲಾ ಪುರಾತನರ ತ್ರಿಪದಿ. ಸು. 1600.

ಇದರಲ್ಲಿ ಶಿವಭಕ್ತರಾದ ಪುರಾತನರ ಸ್ತುತಿರೂಪವಾದ 62 ಪದ್ಯಗಳಿವೆ.

ಏಕೋದೇವ ಘನವೆಂದು | ಕಾಕುಬಸ್ತಿಯನೊಡೆದು | ಲೋಕವರಿಯಲ್ಕೆ ಸಿರವರಿದು |
ಏಳುದಿನ ಮೆರೆದ ಏಕಾಂತರಾಮಯ್ಯ ಶರಣಾಗು ||

ಸೂಲ ತಲೆಯಲಿ ಮೂಡಿ | ಮೇಲೆ ಮುಕ ಪಲ್ಲೈಸಿ | ಲೋಲ ಬಸವೇಶ ಕರಸಲು |
ಮರಸಹಿತ್ಯೈದಿದ ಸೂಲದ ಬ್ರಹ್ಮಯ್ಯ ಶರಣಾಗು ||

ಅಲ್ಲಿ ಮಾಯೆಯನಾಡಿಸಿ | ಸಿಲ್ಲದೆ ಮರ್ತ್ಯಕೆ ಬಂದು | ಎಲ್ಲಾ ಪುರಾತನ ರನು |
ಘಲಹಿ ಕದಳಿಯ ಪೊಕ್ಕ ಅಲ್ಲಮ ಪ್ರಭುವೆ ಶರಣಾಗು ||

## ಗುರುರಗಳೆ. ಸು. 1600.

ಗುರುಸ್ತುತಿರೂಪವಾದ ಗ್ರಂಥ. ಆದ್ಯಂತಗಳಲ್ಲಿ ಗುರುವಿಶ್ವೇಶ ಎಂದು ಮುಗಿವ ಒಂದೊಂದು ಕಂದವಿದೆ. ಮಹಾದೇವ ರಗಳೆಯಲ್ಲಿಯೂ ಹೀಗೆಯೇ ಕಂದವಿರುವುದರಿಂದ ಅದನ್ನೂ ಈ ಗ್ರಂಥಕರ್ತನೇ ರಚಿಸಿರಬಹುದು.

ವಿಭವದಿಂ ಭವದ ಪಾಶವ ಪಱಿದ ಗುರು ಶರಣು | ಅಭವನಾಚಾರದಾಜ್ಞೆಯನಿತ್ತ ಗುರು ಶರಣು |
ನಿತ್ಯಪದವಿಂತುಟೆಂದೊರೆದ ಶ್ರೀಗುರು ಶರಣು | ಮುಕ್ತಿಪೂಜೆಯ ಮಾಱ ತೋಱುತಿಹ ಗುರುಶರಣು ||

ಆದಿಯನಾದಿಗಳೆಂಬಿವ|ಭೇದಿಸಿ ತಾಂ ತಂದು ಯೋಗಸಾಧ್ಯದೊಳಿರಿಸಿಯೆ |
ಬೋಧಿಸಿ ಗುರುಸುಜ್ಞಾನದ|ಹಾದಿಯ ತೋಱಿಸಿದನೆಮ್ಮ ಗುರುವಿಶ್ವೇಶಂ ||

## ಮಹಾದೇವ ರಗಳೆ.

ಶ್ರೀಸಮಸ್ತಲೋಕಜೀವಭಾವಭರಿತಮಹಾದೇವ | ಈಶ ನೀನೆ ಭಕ್ತಿಲತೆಯ ಬೆರಸಿ ಮೆಱೆದ ಮಹಾದೇವ ||
ನರಜನ್ಮವೆಂಬುದತಿಶಯ | ಹರಭಕ್ತಿಯೆ ಅಧಿಕವದಱೊಳಱಿದಾಗ

ಕರ ಭ್ರಾಂತನಾಗಿ ತೊಳಲದೆ । ಪರಮನ ಕೀರ್ತಿಯನು ಮೆಚ್ಚಿದ ಗುರು
ವಿಶ್ವೇಶಂ ||

## ಬಸವೇಶ್ವರ ರಗಳೆ. ಸು. 1600.

ರಗಳೆ ಎಂಬ ಹೆಸರಿದ್ದರೂ ಇದರಲ್ಲಿ 46 ಕಂದಗಳಿವೆ.

ಪ್ರಣವದ ಬಳ್ಳಿ ಒಕಾರಂ । ಪ್ರಣವದನಾದಾನುಸಾರಸಾರ ಸಕಾರಂ ।
ಪ್ರಣವದ ಬಿಂದು ವಕಾರಂ । ಪ್ರಣವಂ ಬಸವಾಕ್ಷರತ್ರಯಂ ಬಸವೇಶಾ ||

## ಪುರಾತನ ಶರಣೆಯರ ತ್ರಿಪದಿ ಸು. 1600.

ಇದರಲ್ಲಿ 54 ಪದ್ಯಗಳಿವೆ; ನೀಲಲೋಚನೆ, ಮಹಾದೇವಿಯಕ್ಕ ಮೊದಲಾದ ಪುರಾತನದೇವಿಯರ ಸ್ತುತಿರೂಪವಾದ ಗ್ರಂಥ.

ಗುರುಭಕ್ತಿಯೊಳು ಸಂದು । ಹರಭಕ್ತಿಯೊಳು ನಿಂದು ।
ಚರಭಕ್ತಿಯಿಂದ ಪರಮೇಶ್ವರನನೊಲಿಸಿದಾ ।
ಶರಣೆಯರಿಗಾನು ಶರಣೆಂಬೆಂ ||

## ಬಸವೇಶ್ವರನ ತಾರಾವಳಿ. ಸು. 1600.

ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಪದ್ಯ 23. ಲಕ್ಕಣ್ಣದಂಡೇಶನ ಶಿವತತ್ವಚಿಂತಾಮಣಿಯಲ್ಲಿರುವಂತೆ ಪ್ರತಿಪದ್ಯವೂ ಚರಣಾಂಬುಜಕ್ಕೆ ಶರಣು ಎಂದು ಮುಗಿಯುತ್ತದೆ

ರವಿಯುದಯವಂ ಬಯಸಿ ಒಱಲುವಂಬುಜದಂತೆ ।
ಶಿವಪದದ ಮಾರ್ಗದಲಿಯೆಡೆವಿಡದೆ ಸಂಚರಿಪ ।
ರವರ ದರುಶನವೆಂದಿಗೆನಗೆ ದೊರಕುವುದೆಂದು ಮನದೊಳಗೆ ತೊಳಲಿ
ಬಳಲಿ ||
ದಿವರಾತ್ರಿ ಹಲುಬಿ ಹಂಬಲಿಸುವವನಾವನವ ।
ನವನ ಪದಕಮಲಕೆಱಗುವ ಮಧುಕರನ ಮಾಡು ।
ಶಿವ ನಿನ್ನ ಬೇಡುತಿಹೆನೆಂಬ ಬಸವೇಶ್ವರನ ಚರಣಾಂಬುಜಕ್ಕೆ ಶರಣು ||

## ವಿರೂಪಾಕ್ಷಸ್ತುತಿ. (ಪದ್ಯ 20) ಸು 1600.

ಅಂಗಭವನತುಳಸರ್ವಾಂಗವಹ ನಿರ್ಗುಣೋ |
ತ್ತುಂಗಶಮನಾಗ್ನಿಸ್ಫುಲಿಂಗ ಹಿಮಶೈಲಜಾ |
ಧಾಂಗ ನತಜನಕಮಲಭೃಂಗ ಶಂಕರ ಕೃಪಾಪಾಂಗ ನಿರ್ಮಲಶುಭಾಂಗ||
ಗಂಗಾತರಂಗಪ್ರಸಂಗತಜಟಾಪಟಲ |
ಮಂಗಳಾತ್ಮಕ ಭಕ್ತಸಂಗಮಂ ರಕ್ಷಿಪುದು |
ಹಿಂಗದನುದಿನಮೆಸೆವ ಪಂಪಾವಿರೂಪಾಕ್ಷಲಿಂಗ ಸತ್ಕೀರ್ತಿಸಂಗ ||

## ಮೂಲಕ ರಾಮಾಯಣ. ಸು. 1600.

ಭಾಮಿನೀಷಟ್ಪದಿ ; ಸಂಧಿ 6. ಮೂಲಕಾಸುರನು ಲಂಕೆಗೆ ಮುತ್ತಿಗೆ ಹಾಕಿ ವಿಭೀಷಣನನ್ನು ಸೋಲಿಸಿ ಒಳಕ ಅಯೋಧ್ಯೆಗೆ ಹೋಗಿ ಭರತ ಶತ್ರುಘ್ನ ಲಕ್ಷ್ಮಣ ರಾಮರನ್ನು ಸೋಲಿಸಿ ಕೊನೆಗೆ ಕುಶನಿಂದ ಸತ್ತನು.

ಹಲ್ಲುಗಿರಿಯುತ ಹಣುಕಿ ನೋಡುತ | ಮಿಳ್ಳಿಸುತ ಬಾಲವನು ತೆಗೆದರು |
ಮಲ್ಲಸುಭಟರು ಖಳನ ಇದಿರಿಗೆ ಪಿಂಗರಾಗಿರಲು ||
ಅಲ್ಲಿ ಚೀಱುತ ಚಿರುಕುಗುಟ್ಟುತ | ಜೆಲ್ಲಿ ನೆರವುತ ಏಡಿಸುತ ಹರಿ |
ದಲ್ಲಿಗಲ್ಲಿಗೆ ನೆರವುತಿರ್ದರು ಮಾಣಿಮರ್ಕಟರು ||

## ಕಕೋಕಶಾಸ್ತ್ರ ಟೀಕೆ. ಸು. 1600.

ಕಾಮಶಾಸ್ತ್ರವಿವರಣ. ಈ ಶಾಸ್ತ್ರಪ್ರವರ್ತಕರಾದ ನಂದಿಕೇಶ್ವರ, ಗೋಣಿಕಾಪುತ್ರ, ದತ್ತಕ, ವಾತ್ಸ್ಯಾಯನ ಮುಂತಾದವರ ಹೆಸರುಗಳೂ ಈ ಶಾಸ್ತ್ರಕ್ಕೆ ಸಂಬಂಧಪಟ್ಟ ಗುಣಪತಾಕೆ, ಶಬ್ದಾರ್ಣವ ಎಂಬ ಗ್ರಂಥಗಳ ಹೆಸರುಗಳೂ ಹೇಳಿವೆ.

ಕಲ್ಪದಾದಿಯೊಳು ಬ್ರಹ್ಮದೇವನು ಪ್ರಜಾಸೃಷ್ಟಿಯಂ ಮಾಡಿ ಅವರ್ಗೆ ತ್ರಿವರ್ಗಸಾಧನೋಪಾಯಶಾಸ್ತ್ರಂಗಳಂ ಒಂದು ಲಕ್ಷ ಅಧ್ಯಾಯದಿಂ ಪೇಳ್ದಂ. ಆವನ ಅಪ್ಪಣೆಯಿಂ ಶಾಸ್ತ್ರದೊಳೇಕದೇಶವಂ ತೆಗೆದುಕೊಂಡು ಸ್ವಾಯಂಭುವ ಮನು ಧರ್ಮಾಧಿಕಾರವಂ ಮಾಡಿದಂ. ಬೃಹಸ್ಪತಿ ಅರ್ಥಾಧಿಕಾರವಂ ಮಾಡಿದಂ.

ಪರಮೇಶ್ವರನ ಅನುಚರನಾದ ನಂದಿಕೇಶ್ವರನು ಪುರುಷಾರ್ಥಸಂತತಿವೃದ್ಧಿಗೆ ಕಾರಣವಾದುದರಿಂದ ಕಾಮಶಾಸ್ತ್ರಮಂ ಸಾವಿರ ಅಧ್ಯಾಯ ಸೂತ್ರರೂಪವಾಗಿ ಪೇಳಿದಂ. ಅದಂ ಐನೂಱು ಅಧ್ಯಾಯದಿಂದ ಶ್ವೇತಕೇತು ಪೇಳಿದಂ. ಅದಂ ನೂಱು ಅಧ್ಯಾಯದಿಂದ ಸಾಧಾರಣ ಸಾಂಪ್ರಯೋಗಿಕ ಕನ್ಯಾಸಂಪ್ರಯುಕ್ತಕ ಭಾರ್ಯಾದಿಕಾರಕ ಪಾರದಾರಿಕ ವೈಶಿಕೌಪನಿಷದಿಕಂಗಳೆಂಬ ಆಱು ಅಧಿಕರಣಂಗಳಂ ಬಾಭ್ರವ್ಯ ಪಾಂಚಾಲನು ಪೇಳಿದಂ. ಮತ್ತಂ ಐದನೆಯ ಅಧಿಕರಣವಾದ ವೈಶಿಕವಂ ಪಾಟಲಿಪುರವೆಂಬ ಪಟ್ಟಣದ ವೇಶ್ಯಾಸ್ತ್ರೀಯರ ಪ್ರಾರ್ಥನೆಯಿಂದ ದತ್ತಕನೆಂಬವಂ ಪೇಳಿದಂ ಔಪನಿಷದಿಕವೆಂಬ ಅಧಿಕರಣಮುಂ ವಾತ್ಸ್ಯಾಯನನೆಂಬ ಋಷಿ ಏೞು ಅಧಿಕರಣಂಗಳಿಂ ಅನೇಕವಿಧವಾಗಿ ಈ ಕಾಮಶಾಸ್ತ್ರವಂ ಸರ್ವಜನಸಂತೋಷಕರವಾಗಿ ಸೂತ್ರರೂಪವಾಗಿ ಪೇಳಿದುದರಿಂದ ಇದು ಋಷಿಸಮ್ಮತವೆಂದು ಪೇೞಲ್ಪಟ್ಟುದು. ಕಕ್ಕೋಕನೆಂಬ ಮಹಾಕವಿ ಋಷಿಪ್ರೋಕ್ತವಾದ ಈ ಕಾಮಶಾಸ್ತ್ರಮಂ ಪಂಡಿತಪಾಮರರ್ಗಂ ಆಬಾಲವೃದ್ಧರ್ಗಂ ರಂಜನೆಯಾಗುವಂತೆ ಪೇಳಿದಂ.

## ಸರ್ವಾಂಗಮುಖಿಮಣಿ. ಸು. 1600.

ವಚನ 590 ; ಅಪ್ರಮಾಣ ಕೂಡಲಸಂಗಮದೇವ ಎಂಬ ಅಂಕಿತವಿದೆ.

## ಶಾಂಭವೀ ಚಕ್ರೋದ್ಧರಣೆ. ಸು. 1600.

ಇದು ಪ್ರಾಯಿಕವಾಗಿ ಗದ್ಯಗ್ರಂಥ. ಅಲ್ಲಲ್ಲಿ ಪುರಾತನರ ವಚನಗಳು ಉದಾಹೃತವಾಗಿವೆ. ಕೊನೆಯಲ್ಲಿ "ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರ ನಿಮ್ಮ ಶರಣರಾದ ಯೋಗಿಗಳೆ ಬಲ್ಲರು " ಎಂದು ಹೇಳಿದೆ. ಇದರಲ್ಲಿ 10 ಪದಗಳೂ ಇವೆ. ಒಂದನ್ನು ಉದಾಹರಿಸುತ್ತೇವೆ :—

ಹತ್ತುದಳ ಕಮಲಮಣಿಪೂರಕದ ಚಕ್ರದಲಿ ।
ವಿಸ್ತಾರಶಿಖಾಗ್ರ ಪ್ರಣವುವನೆ ಧ್ಯಾನಿಪುದು ॥
ವಸ್ತುಸಕಲವನೀವ ರುದ್ರನೇ ಗತಿಯೆಂದು ।
ಹತ್ತು ಅಕ್ಷರವ ಭಕ್ತಿಯಲಿ ಭಾವಿಪುದು ॥

ಇಷ್ಟಲಿಂಗಚಾರಿತ್ರ (ಪದ್ಯ 47). ಸು. 1600.

ನಿಧಿಯಿದೆ ನಿಧಾನವಿದೆ ಸುಧೆಯಿದೆ ಸುವರ್ಣಗಿರಿ |
ಯಿದೆ ಸಿದ್ಧರಸದ ಮಡುವಿದೆ ಮರುಜೆವಣಿಯ ಗಿಡು |
ವಿದೆ ಸುರರ ಭೂಜವಿದೆ ಸುರಭಿಯಿದೆ ಚಕಿತಮಭಿಧತ್ತೆ ಶ್ರುತಿರಪಿ ಎನಿಪ್ಪ||
ಅಧಿಕನಿತ್ಯನಿರಾಳವಿದೆ ತತ್ವಮಸಿ ಪದಾ |
ರ್ಥದ ತುಟ್ಟತುದಿಯ ನಿರ್ವಯಲ ನಿಶ್ಶೂನ್ಯ ಬಂ |
ದಿದೆ ಕರಸ್ಥಳದೊಳಾಹಾ ಮಹಾದೇವ ನಾನೇಂ ಭಾಗ್ಯನೋ ಯೋಗ್ಯನೋ ||

ಗುರುಶಿಷ್ಯವಾದ (ಪದ 31). ಸು. 1600.

ಪಲ್ಲವಿ||ಚೆನ್ನಶ್ರೀಗುರುರಾಯ ನಿಮ್ಮಪಾದಂಗಳನು |
ಮುನ್ನಲಱಸುತ ಬಂದೆಯೆನ್ನ ಭವಬಾಧೆಗಳ |
ಚೆನ್ನಾಗಿ ಪರಿಹರಿಸಿ ಮನ್ನಿಸೆನ್ನಯ ಗುರುವೆ ನಿಮ್ಮ ಮಹಿಹೊಕ್ಕೆನಭವಾ ||
ನೆಲೆದಪ್ಪಿ ಕುಲಗೆಟ್ಟು ಚಲವಬಿಂದು ತಲೆಯೆತ್ತಿ |
ಒಲುಭಂಗದೊಳು ನಿಂದು ಪುಲಿನೊವಲನುಟ್ಟಂಗೆ |
ಸಲಹೆಂದು ಕಾಡುವರೆ ಪರಮಪೂಷರ ಮೂಢ ನಾಚಿಕಿಲ್ಲೇನು ನಿನಗೆ ||

ಶಬ್ದಾಗಮು. ಸು. 1600.

ಕನ್ನಡನಿಘಂಟು; ಕಂದರೂಪವಾಗಿದೆ. ಪ್ರತಿಪದ್ಯವೂ ಶಬ್ದಾಗಮದೊಳ್ ಎಂದು ಮುಗಿಯುತ್ತದೆ.

ಶ್ರೀಧರಮೆನೆ ಗಿರಿಯಕ್ಕುಂ | ಶ್ರೀಧರಮೆನೆ ಸಿಂಹಮಕ್ಕು ಸಿಂಗರಮಕ್ಕುಂ|
ಶ್ರೀಧರಮೆನೆ ಜಲಮಕ್ಕುಂ | ಶ್ರೀಧರನೆನೆ ವಿಷ್ಣುವಕ್ಕು ಶಬ್ದಾಗಮದೊಳ್ ||
ಶ್ರೀಧರಮೆನೆ ಕೊಳಮಕ್ಕುಂ | ಶ್ರೀಧರಮೆನೆ ಕೋಟೆಯಕ್ಕು ಕುಮುದಮದಕ್ಕುಂ |
ಶ್ರೀಧರಮೆನೆಯುಜನಕ್ಕುಂ | ಶ್ರೀಧರನೆನೆ ಶಿವನದಕ್ಕು ಶಬ್ದಾಗಮದೊಳ್ ||
ಆರಡಿಯೆನೆ ಮುಡಿಯಕ್ಕುಂ | ಆರಡಿಯೆನೆ ತುಂಬಿಯಕ್ಕು ಮಾರಡಿತುರಗಂ |
ಆರಡಿಯೆನೆ ಗಿರಿಯಕ್ಕುಂ| ಆರಡಿಯೆನೆಯುಹಿಯುದಕ್ಕು ಶಬ್ದಾಗಮದೊಳ್ ||

## ಭಾರತನಿಘಂಟು. ಸು. 1600.

ಕಂದ 67. ಆದಿಯಲ್ಲಿ ಸರಸ್ವತೀಸ್ತುತಿ ಇದೆ. ಇದರಲ್ಲಿ ಕುಮಾರ ವ್ಯಾಸನು ಪ್ರಯೋಗಿಸಿರುವ ದೇಶ್ಯಶಬ್ದಗಳಿಗೆ ಅರ್ಥವು ಹೇಳಿದೆ.

ತಲ್ಲಣಮೆನೆ ಭಯಮಕ್ಕುಂ | ಹಲ್ಲಣಿಸಿತೆನಲ್ಕೆ ನಿಲ್ಲದೈದಿದುದಕ್ಕುಂ |
ಭುಲ್ಲವಣೆಯೆನಲು ಪೆರ್ಚುಗೆ | ಘಲ್ಲಣೆಯೆನೆ ಘಾತಿಯೆಂದು ತಿಳಿಗೆ ವಿದಗ್ಧರ್ ||
ಕೊಳುಗುಳಮೆಂದೆನೆ ಕಾಳೆಗ | ಮಳವೆಂದೆನೆ ಸತ್ವಮುಂ ಸಮೀಪಮುಮಕ್ಕುಂ |
ತಳಪಟಮೆಂದೊಡೆ ಬಯಲು | ಮ್ಮಳಮೆಂದೊಡೆ ದುಗುಡಮೆಂದು ತಿಳಿಗೆ ವಿದಗ್ಧರ್ ||

## ಸಿದ್ಧೇಶ್ವರತ್ರಿಪದಿ. ಸು. 1600.

ಪ್ರತಿಪದ್ಯವೂ "ಸಿದ್ಧೇಶಾ ದಯವಾಗೋ" ಎಂದು ಮುಗಿಯುತ್ತದೆ. ಪದ್ಯ 40.

ಆಸೆಯು ದಾಸನಿಗೆ | ವೇಷದ ಚೋರನಿಗೆ | ಭಾಷೆಹೀನನಿಗೆ ದೋಷ |
ಕ್ಕೀಡಾದವಗೆ | ಸೋಸಲ ಸಿದ್ಧೇಶಾ ದಯವಾಗೋ ||

## ಲೋಕಸ್ವರೂಪ (ಕಂದ 24). ಸು. 1600

ಶ್ರೀವರ್ಧಮಾನಜಿನರಂ | ಭಾವನಮಸ್ಕಾರದಿಂದೆ ವಂದಿಸಿ ಮುದದಿಂ |
ಭಾವಕರಿಗಱಿಯೆ ಪೇೞ್ವೆಂ | ಪಾವನಲೋಕಸ್ವರೂಪಮಂ ಬುಧನುತಮಂ ||

## ಉಪವಾಸಗಳು (ಗದ್ಯ). ಸು. 1600

ಭಾದ್ರಪದಮಾಸದ ಶುಕ್ಲಪಕ್ಷದ ಸಪ್ತಮಿಯ ದಿನದಲು ಉಪವಾಸಮಂ ಮಾಡುವುದು—ಇತ್ಯಾದಿ.

## ನೀತಿಕಂದಶತಕ. ಸು. 1600.

ಮುದದೆಡೆಗೆ ದುಃಖದೆಡೆಗಂ | ಸುದತಿಯರ ವಿಯೋಗದೆಡೆಗೆ ಕೂಡಿರ್ದೆಡೆಗಂ |

ಕದಡಿರ್ದ ಚಿತ್ತದೆಡೆಗಂ | ಪದಪಿಂದಂ ಬಂಧುವಲ್ತೆ ಸಾಹಿತ್ಯರಸಂ ||
ಮಾನಿತಪದಮಂ ಪದಸಂ | ಧಾನಮನರ್ಥಪ್ರತೀತಿಯುಂ ಕವಿಹೃದಯ |
ಸ್ಥಾನಮನಱಿದೋದದೆ ಕ | ಣ್ಬೇನೆಯ ಕರಡಿಯವೊಲಱಿಚುವಂ ವಾಚಕನೇ ||

## ನೀತಿಪದ್ಯಗಳು. ಸು. 1600.

ಪರಿಜನಫಲವತ್ಕ್ಷೇತ್ರೋ| ತ್ಕರಬಂಧುಜನಾಳಿ ಭವನಮಹಿಳಾವಳಿಯಿಂ |
ಬುರುತರಪವರ್ಗಚಿಂತಾ | ತುರನಪವರ್ಗಪ್ರಚಿಂತೆಯಂ ಮಾಡುಗುಮೇ ||
ಯಸ್ಮಾತ್ತಸ್ಮಾತೆಂಬೀ | ಕಶ್ಮಲದಿಂದಾದ ನುಡಿಯ ಜಾಣ್ಮೆಗಳೆಲ್ಲಂ |
ವಿಸ್ಮಯಕರ್ಣಾಟಕಳಾ | ರಶ್ಮಿಯ ರಚನೆಗಳ ಮುಂದದೇಂ ಸೊಗಯಿಕುಮೇ ||

ಹೆಣ್ಣಂ ತಲೆಗೇಱಿಸಿ ತಿರಿ| ದುಣ್ಣನೆ ಮುನ್ನೊರ್ವ ಮೂಱುಕಣ್ಣಸಿವಂ ಮು |
ಕ್ಕಣ್ಣಂಗಾವಿದಿಯುಳಿದಾ | ದಣ್ಣಂಗಳನಣ್ಣೆಕಲ್ಲನಾಡರೆ ಸತಿಯರ್ ||
ಸುರಗಿ ಸುರಹೊನ್ನೆ ಸಂಪಗೆ | ಸರಸಿಜಮಿರೆ ಮದ್ದುಗುಣಿಕೆಗೀಶ್ವರನೊಲಿವಂ |
ಅರಸುಗಳುಂ ಕಾಂತೆಯರುಂ | ಹುರುಳಿಲ್ಲದವರ್ಗೆ ಕೂರ್ಪರಿದು ಸಿದ್ಧಾಂತಂ ||

ಧನಮದು ನಗುವುದು ಲೋಭಿಯ | ತನಯನ ಮುದ್ದಿಸುವ ಸತಿಯನಸತಿಯ ನಗುವಳ್ |
ಅನುಪರವಂ ಕಂಡಂಜುವ | ಜನಪತಿಯಂ ನೃತ್ಯದೇವಿ ನಗುವಳ್ ರಾಮಾ ||

## ಸಿದ್ಧೇಶ್ವರನ ತ್ರಿಪದಿ (ಪದ್ಯ 55). ಸು. 1600.

ವರಗುರುಸಿದ್ಧೇಶ್ವರ | ನುರುತರ ಸ್ತೋತ್ರವನು| ಬರೆದರ್ಥವನು ಪೇಳಿ' |
ಕೇಳಿದವರಿಗೆ | ಪರಶಿವನೊಳೈಕ್ಯವಿದು ಸಿದ್ಧಾಂತ ||

## ತುರಂಗಧಾಟ. ಸು. 1600.

ದುಂಡಕ. ಕೊನೆಯಲ್ಲಿ " ಶಾಂತವೀರೇಶದೇವ ಜಯಜಯಾ " ಎಂದಿದೆ.

## ಸಕಲಸಾರ ಸಂಗ್ರಹ. ಸು. 1600.

ಪಳಿಕಿನ ಕೊಡನೊಳ್ ಸಹಜಂ|ಬೆಳಗುವ ಶಶಿಕಾಂತದೆಸೆವ ಬಿಂಬಾಕೃತಿ ತ|
ನ್ನೊಳಗೊಳಗೆ ತೊಳಗಿ ಬೆಳಗುವ | ಬೆಳಗಂ ನಿಜವಾಗಿ ಕಂಡೊಡದು ಪಿಂಡಸ್ಥಂ ||

## ಜಿನೇಂದ್ರಮಾಲೆ. ಸು. 1600.

ಜ್ಯೋತಿಷಗ್ರಂಥ; 150 ಕಂದಗಳಿವೆ. ಹಲವು ಕಂದಗಳು " ಜಿನಪದ ಭೃಂಗ " ಎಂದು ಮುಗಿಯುತ್ತವೆ.

ಮೂಡಣದೆಸೆಯೊಳ್ ದಿನಪಂ|ನೋಡಿರೆ ತಾನಗ್ನಿಯಲ್ಲಿ ಮಂಗಳನಿರ್ಕುಂ|
ಕೂಡೆ ಬೃಹಸ್ಪತಿ ತೆಂಕಲ್ | ರೂಢಿಗೆ ನೈರುತ್ಯದಲ್ಲಿ ಬುಧ ಪತಿಸುಗುಂ||
ನಿಂದಿರ್ದು ನಡೆದು ಮಲಗಿದ|ನೆಂದುದಕಾಯೇಱಿಱಲ್ಲಿ ನೆಲಸಿದ ಗ್ರಹದಿಂ |
ಸಂದಿರ್ದ ಪೂರ್ಣದೃಷ್ಟಿಯೊ | ಳಂದಱಿವುದು ಪಯಣಗತಿಯ ಜಿನಪದ ಭೃಂಗಾ ||

## ರಾಜನೃಪಚರಿತೆ. ಸು. 1610.

ಸೂಜಿಯ ಮೊನೆಯ ತಾಗಿದ ಪಂಚರತ್ನ ವಿ | ರಾಜಿಸಿತಬಲೆಯರೆದೆಗೆ |
ಆಜಿರಂಗದೊಳಲಗಿನ ಮೊನೆ ತಾಗಿದ | ರಾಜನಿಗವನಿ ಮೋಹಿಪುದು ||
ಅಳುಕದಱ'ದೊಡೆ ಸಂಗರದೊಳು ಸಗ್ಗ|ದಲನೆಯರುಗಳು ಮೋಹಿಪರು|
ಉೞ'ದನಾದೊಡೆ ನರಲೋಕಸಂಪದ ಬಂದು|ನೆಲಸುವುದಾತನಿಗೊಲಿದು ||
ಧರೆಯ ವೈರಿಗಳ ಗರ್ವವ ಸುಟ್ಟು ಮೇಲಣ|ತರಣಿಬಿಂಬಕೆ ಧಾೞ'ಯಿಡುವ|
ನರಪತಿವಿಕ್ರಮಶಿಖಿಯೆನೆ ಪದರೇಣು | ಪರಿದುದಾಕಾಶಮಂಡಲಕೆ ||
ಜಡಿವ ಖಡುಗ ಮಿಂಚು ಮೊರೆವ ವಾದ್ಯದ ರವ | ಗುಡುಗು ಕೂರ್ವಾಳ ಹೊಯ್ಲುಗಳು |
ಸಿಡಿಲು ನೆತ್ತರು ಮಱೆವನಿಯಾಗೆ ರಣಭೂಮಿ|ಪಡೆದುದು ಕಾರ್ಗಾಲವನು||
ಪರಮೊಗುರುಳ ಕಿಱುವೆಱೆನೊಸಲಿನ ಮಿಗ | ವಱಗಣ್ಣ ತೊಳಪ ಕದಪಿನ |
ನೞಿವೆಱೆವೊಗದೇಱುಂಜವ್ವನೆಯರು ಬಂದು | ತುಱುಗಿಹರೋಲಗದೊಳಗೆ ||

ಬಟ್ಟವೊಗದ ಬಡನಡುವಿನ ನೈದಿಲ । ನಿಟ್ಟೆಸಳ್ಗಣ್ಣ ಮೋಹಿಸುವ ।
ಇಟ್ಟೆಡೆವೊಲೆಯ ತೆಳ್ವಸಿಱಿನ ನೀಱೆಯು । ರಿಟ್ಟಣಿಸಿದರು ಜೆಲ್ವಿಂದ ॥

ಜಗದೇವರಾಯನ ಕಾವ್ಯ. ಸು. 1620.

ಚೆನ್ನಪಟ್ಟಣದ ದೊರೆಯಾದ ಜಗದೇವರಾಯನ ಸ್ತುತಿರೂಪವಾದ ಗ್ರಂಥ; ವೃತ್ತ 120. ಆರಂಭದಲ್ಲಿ ವಿಷ್ಣು, ಶಿವ ಇವರುಗಳ ಸ್ತುತಿ ಇದೆ.

ಭೂನಾಥಂ ಮಣಿಕಂಠಸದ್ವರದರಾಜಂ ನೋಡೆ ಚಿಂತಾಮಣಿ ।
ಸ್ಥಾನಂ ತಾರ್ಕಿಕರಕ್ಷಣಂ ಶಶಧರಾಸ್ಯಂ ನಾಡೆ ಸತ್ತರ್ಕಭಾ ॥
ಷಾನಂದಂ ಕಿರಣಾವಲೀಕ್ಷಣಪರಂ ಸದ್ವರ್ಧಮಾನೋದಯಂ ।
ತಾನಾದಂ ಜಗದೇವರಾಯಮಹಿಪಂ ಸತ್ತರ್ಕಶಾಸ್ತ್ರೋದಯಂ ॥
ತಾಂ ಮೂಱಾಜಿಡಿಯೆಯ್ದೆ ತನ್ನ ರಿಪುಗಳ್ ಭೂಲಂಘನಂ ಗೆಯ್ದಪರ್ ।
ತಾನೊಂದಂಬನೆ ಬಿಟ್ಟೊಡಂದು ರಿಪುಗಳ್ ಸರ್ವಾಸ್ತ್ರಮಂ ಬಿಟ್ಟಪರ್ ॥
ಪ್ರೇಮಂಬೆತ್ತು ವಸುಂಧರಾಪತಿಗೆ ತಾಂ ಪ್ರಾಣೇಶನಾಗಲ್ ರಿಪು ।
ಸ್ತೋಮಂ ನಾಕನಿವಾಸಿನೀಪತಿಗಳಾದರ್ ಭೂಪನೇಂ ವೀರನೋ ॥
ಧುರದೊಳ್ ಶ್ರೀಜಗದೇವ ನಿನ್ನ ವಿಜಯಪ್ರಸ್ಥಾನದೊಳ್ ವಾಜಿಸ ।
ತ್ಖುರಘಾತೋತ್ಥಿತಧೂಳಿಯಿಂ ಜಲಧಿಯೆಲ್ಲಂ ಬತ್ತಿ ಪೋಗಲ್ ದಿಟಂ ॥
ಹರಿ ನಿನ್ನೀಮನದೊಳ್ ಕಟಾಕ್ಷರುಚಿಯೊಳ್ ಶ್ರೀಕಾಂತೆ ಹಸ್ತಾಗ್ರದೊಳ್ ।
ಸುರವೃಕ್ಷಂ ಖರಖಡ್ಗದೊಳ್ ವಿಷಮರಿಸ್ತ್ರೀಯೊಳ್ ತದೌರ್ವಾನಳಂ ॥

ಮಡಿವಾಳಯ್ಯಗಳ ತಾರಾವಳಿ. ಸು. 1650.

ಹಾಡಿನಂತಿದೆ; ನುಡಿ 27. ಆದ್ಯಂತಗಳಲ್ಲಿ ಒಂದೊಂದು ಕಂದವಿದೆ. ಮಡಿವಳಮಾಚಯ್ಯನ ಸ್ತುತಿರೂಪವಾದ ಗ್ರಂಥ. ಈತನು ವೀರಭದ್ರಾವತಾರವೆಂದು ಹೇಳಿದೆ.

ವರವೀರಭದ್ರನುದ್ಧವಿಸಲತ್ತಮರಿಗೆ ।
ದುರಿತ ದುಷ್ಕೃತದ ಸೂಚನೆಯ ಸ್ವಪ್ನಗಳಾಗೆ ।
ಅರುಣಕೋಟಿಗಳೊಗೆದಂತೆ ಪ್ರಜ್ವಲವಾಗೆ ।
ಸುರಸತಿಯರ ಕರ್ಣಪತ್ರವೋಸರಿಸುಗೆ ।
ಶರಧಿ ಘೂರ್ಮಿಸುವಂತೆ ಸಂಜೆ ಬೊಬ್ಬೆಗಳಾಗೆ ।

ಉರಿವ ನಗಾನುಗತವಾಗಿ ಕಾರ್ಜೊಗೆಯಾಗೆ |
ಸುರಮುನಿಮುಖಿಗಳು ಶವದಂತಾಗಲು ಮಿಗೆ |
ಹರಿವಿರಿಂಚಿಗಳಿಗೆ ಹಮ್ಮು ಪಲ್ಲಟವಾಗೆ |
ಹರುಷಗುಂದಲು ದಕ್ಷನಿಂತೆಂದನವರಿಗೆ |
ಮರುಳೊಡನಾಡುವ ಮತಿಹೀನಗೊರವಂಗೆ |
ಪೆಱತಂಜುವೆನೆ ಎಂದನು | ಆ ಸಮಯದಿ ಧುರಧೀರನೈತಂದನು |
ದಕ್ಷನ ಸಿರವರಿದು ಹೋಮದೊಳಿಟ್ಟನು |
ಪದ್ಮಾಕ್ಷನ ಸಿರವನು ಹಱಿಯಲೆಚ್ಚನು |
ಭಾರತಿಯ ಮೂಗನರಿದು ಕರದೊಳಿತ್ತನು |
ಪೂವಡಿಗನುರವ ತುಱಿದು ಕುಲಿಲೆಂದು ಬೊಬ್ಬಿಱಿದನು ||

## ಗುರುಸ್ತೋತ್ರ. ಸು. 1650.

ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಪದ್ಯ 25.

ಲಿಂಗದೊಳು ನಡೆ ಲಿಂಗದೊಳು ನುಡಿ|ಲಿಂಗದೊಳು ಸಕಲಾಂಗಸಮರಸ
ಲಿಂಗದೊಳು ತನುಭಾವಕರಣಗಳೊಂದು ಹುರಿಯಾಗಿ ||
ಲಿಂಗದೊಳು ಕೀಲಿಸಿದ ಕಂಗಳು | ಹಿಂಗದಿರೆ ನಿಜಮುಕ್ತಿಯೆನುತದ |
ಱಿಂಗಿತವನೆನ್ನೊಳಗೆ ತೋಱಿದ ಗುರುವೆ ಶರಣಾರ್ತಿ ||

## ಉದ್ಧರಣೆಯವಾಕ್ಯ. ಸು. 1650.

ಶ್ರೀವೀರಶೈವಸಿದ್ಧಾಂತಸ್ಥಾಪನಾಚಾರ್ಯರಪ್ಪ ಆದ್ಯರ ಅನುಮತದಿಂದುದ್ಧರಿಸಿದ ಶಿವಲಿಂಗಾಂಗಸಂಬಂಧಪ್ರತಿಪಾದಕಾಗಮಗ್ರಂಥವಾಕ್ಯಂಗಳಿಂ ಕೆಲವು ವಚನಂಗಳಂ ಸಂಗ್ರಹಿಸಿದ ಉದ್ಧರಣೆಯ ಸಂಬಂಧ.

## ಬಸವಲಿಂಗನಾಮಾಷ್ಟೋತ್ತರ (ನುಡಿ 108). ಸು. 1650.

ಘೋರಪಾಪದೋಷಪುಂಜಕುಜಕುಠಾರ ಬಸವಲಿಂಗ |
ಸಾರವೀರಶೈವಸಮಯಚಕ್ರವರ್ತಿ ಬಸವಲಿಂಗ ||

ಮಾಯೆಯೆಂಬ ಬಲೆಗೆ ಸಿಲುಕಿ ಮರುಳನಾದೆ ಬಸವಲಿಂಗ ।
ಕಾಯೊ ಎನ್ನ ಕರ್ಮಗಳನು ಕಡೆಗೆ ಮೆಟ್ಟಿ ಬಸವಲಿಂಗ ॥

### ಪಾರ್ವತೀಸ್ತುತಿ (ವಾರ್ಧಕಷಟ್ಪದಿ). ಸು. 1650.

ಪರಮೇಶ್ವರಿಯ ಪುಣ್ಯನಾಮವನು ಪಗಲಿರುಳು ।
ಸರಸಾನುರಾಗದಿಂದೋದಿ ಕೇಳಿದವರ್ಗೆ ।
ದುರಿತಕಂಟಕವಟಿ'ದು ಕೈಸಾರುತಿಹುವಮಳತರಭೋಗಮೋಕ್ಷಂಗಳು ॥

### ಬಸವಸ್ತುತಿ (ನುಡಿ 31). ಸು. 1650.

ಧರಣಿಪತಿಯು ಓಲಗದೊಳು । ಶರಣನಾಗಮಯ್ಯ ಬರಲು ।
ಬೆರಳಿನಲ್ಲಿ ಹಾಲ ಕರೆದ ಬಸವ ಪಾಹಿ ಮಾಂ ॥
ವಿಷಮರೂಪುತಾಳಿ ಬಂದ । ವಿಷಮಧಾರಿ ಜಂಗಮಕ್ಕೆ ।
ಲೇಸಿನಿಂದ ಬಸವನೆದ್ದು ಶರಣುಮಾಡಿದ ॥
ಚಿತ್ರರೂಪು ಜಂಗಮರ । ಪ್ರತಿಮೆಗಳಿಗೆ ಪ್ರಾಣವಿತ್ತು ।
ಅತಿಶಯಿಂದ ಬಸವ ಮನೆಗೆ ಕರೆದು ತಂದನು ॥

### ಅಂಗಜಬೋಧೆ. ಸು. 1650.

ಕಾಮಶಾಸ್ತ್ರ; ಭಾಮಿನೀಷಟ್ಪದಿ, ಸಂಧಿ 9, ಪದ್ಯ 288. ಆದಿಯಲ್ಲಿ ಗಣೇಶ, ಶಿವ, ಮನ್ಮಥ, ಇವರುಗಳ ಸ್ತುತಿ ಇದೆ. ಹರ, ಗಿರಿಜೆ, ನಂದಿಕೇಶ್ವರ, ಭರತಾಚಾರ್ಯ, ಸೋಮೇಶ್ವರ, ಜಯಮಂಗಳ, ವಾಸವ, ವ್ಯಾಸಬೋಧ, ಸರಸಿಜಾಕ್ಷ, ಪುಷ್ಪದಂತ, ಹರಿಹಯ, ರತಿಗುಣಪತಾಕೆ, ಕಕ್ಕೋಕ, ಪಾಂಚಾಲ, ನಾರಾಯಣ, ಸಿರಿಸುತ, ಸುರರು, ಮನುಗಳು, ಭೋಜರಾಜ, ಸೌಮ್ಯನರ, ದತ್ತಕ, ಕೂಚಿಮಾರ, ಶಶಭದ್ರ ಮೊದಲಾದ ಪ್ರಮಾಣಗಳನ್ನು ಅನುಸರಿಸಿರುವಂತೆ ಕವಿ ಹೇಳುತ್ತಾನೆ.

ಚಿತ್ತದಿಂಗಿತವಱಿದು ಹರುಷವ । ನಿತ್ತು ಕರುಣಕಟಾಕ್ಷದಿಂದಲಿ ।
ಸತ್ಯಸಂತೋಷದಲಿಯಭಯವನಿತ್ತು ನಿಜಪತಿಗೆ ॥

ನಿತ್ಯಕೃತ್ಯದ ನಿಯಮದಲಿಯನು । ರಕ್ತಿಶಕ್ತಿಯನಿತ್ತು ಮನವೊ ।
ಚ್ಚತ್ತುಗೊಂಡನುಕೂಲೆಯಾಗಿಹ ಬಾಲೆ ಕುಲಯುವತಿ ||

## ನೀತಿವಾರ್ಧಕ. ಸು. 1650.

ತನ್ನ ಕಾರ್ಯಕ್ಕಾಗಿ ಪರರ ಕೆಡಿಸುವರೊಳಂ ।
ಭಿನ್ನವಿಲ್ಲಗೆ ಭಾಷೆಕೊಟ್ಟು ತಪ್ಪುವರೊಳಂ ।
ಹೊನ್ನಾಸೆಗಾಗಿ ಮಱೆಹೊಕ್ಕವರ ಕಡಿಪರೊಳು ವಿಶ್ವಾಸ ಸಲ್ಲ ಕೇಳ್ಳೈ ||
ಕನ್ನಡೊಳಗಣ ಗಂಟ ಕೈನೀಡಿ ತೆಗೆವಂತೆ ।
ಸುಣ್ಣಾ ಪಾಯಸನೆಂದು ಸುರಿದುಂಬ ಮರುಳಂತೆ ।
ಯಿನ್ನಿವರೊಳೇನುಫಲ ದೊರೆಕೊಳ್ಳದಲೆ ಕುವರ ಕೇಳೆಂದ ಗುರುವರೇಣ್ಯ||

## ಶ್ರಾವಕಾಚಾರ. ಸು. 1650.

ಸಾಂಗತ್ಯ: ಪದ್ಯ 93. ಆರಂಭದಲ್ಲಿ ಶಾಂತೀಶ, ಸಿದ್ಧಾದಿಗಳು, ಸರಸ್ವತಿ ಇವರುಗಳ ಸ್ತುತಿ ಇದೆ ಸ್ತ್ರೀಯರಿಗೆ ಉಪದೇಶರೂಪವಾದ ಗ್ರಂಥ.

ಕೊಲೆ ಹುಸಿ ಕಳವು ಪರಾಂಗನೆ ಬಹುಕಾಂಕ್ಷೆ । ಪಲ ಮದ್ಯ ಜೇನ ತುಪ್ಪವನು ।
ಸಲೆ ಜೀವರಾಶಿ ಪಾಲ್ಮರದ ಫಲಂಗಳ । ನೊಲಿದು ಜೈನರು ಬಿಡಬೇಕು ||
ಕಟ್ಟಿದ ಕರ್ಮದಿ ಹುಟ್ಟಿದ ದೇಹಕೆ । ತೊಟ್ಟನೆ ವ್ಯಾಧಿ ತೋಱಿದೊಡೆ ।
ಹೆಟ್ಟಗೆ ಕಣಿಯರ ಮನೆಗೈದಿ ಸೇಸೆಯ।ನಿಟ್ಟುಕೈಮುಗಿದು ಕೇಳುವುದೇ ||
ಉತ್ತಮಕುಲಸತಿಯರು ನೀಚಕಣಿಯರಿ । ಗೆತ್ತಿ ಕೈಮುಗಿದಾಗ ತಮ್ಮ ।
ಉತ್ತಮವ್ರತಕತಿಚಾರ ಮತ್ತಾವುದು । ಮತ್ತೆ ದುರ್ಗತಿಗೆ ಕಾರಣವು ||
ಗಟ್ಟಿಪಾವಡೆಯಲ್ಲಿ ಶೋಧಿಸಿದುದಕವ । ನೆಟ್ಟನೆ ತಂದು ಶುಚಿಯಾಗಿ ।
ಬಿಟ್ಟು ಜೀವಾಳಿಯ ಶುದ್ಧೋದಕದಿಂದ । ಹೆಟ್ಟುಗೆಯಡುಗೆಮಾಡುವುದು||
ಮಕ್ಕಳಿಗೆಂಜಲಿಲ್ಲೆಂಬ ಮಾತನು ಮಾಡಿ । ಮಕ್ಕಳ ಒಳಲೆ ಕಟ್ಟಿಗಳ ।
ಮಿಕ್ಕ ಹಾಲೆಂಬಿವ ಮುಟ್ಟದೆ ಮಡಕೆಯ।ನಕ್ಕಕೈದೊಳೆದು ಮುಟ್ಟುವುದು||
ಮಕ್ಕಳ ತೊಡೆಯಮೇಲಿಟ್ಟು ಬೀಸಲು ಸತಿ । ಮಕ್ಕಳ ಕೈಕಾಲುಗಳು ।
ದೊಕ್ಕನೆ ಮುಟ್ಟುವುವೆಂದವ ಸಂತೈಸಿ । ಯಕ್ಕ ಸುದ್ದದಲಿ ಬೀಸುವುದು ||

## ಶುಕಸಪ್ತತಿ ಸು. 1650.

ಭಾಮಿನೀಷಟ್ಪದಿ; ಪದ್ಯ ಸುಮಾರು 3000. ಕೆಳದಿಯರಸರ ಕಾಲದಲ್ಲಿ ಹುಟ್ಟಿದ ಗ್ರಂಥ. "ಶುಕನಗ್ನಿಭೂಭುಜಗುಸಿದತಿಕೌಶಲ್ಯಕಥೆಯನು ವಿರಚಿಸುವೆನು" ಎಂದು ಕವಿ ಹೇಳುತ್ತಾನೆ.

ಜಡೆಮುಡಿಯ ನಡುವೆಡೆಯೊಳಡಗಿಹ । ಮಡದಿಯನು ಬಿಡದಡಿಗಡಿಗೆ ಘುಡು ।
ಘುಡಿಸಿ ಸಿಡಿಮಿಡಿಗುಟ್ಟುತೆದೆತೊಡೆಗಡರಿ ಜಡಿಯುತ್ತ ॥
ಮಿಡುಕಿ ಜಡಿಬಿಡಿಯಾಗಲಾಬಡ । ನಡುವಿನಬಳೆಯಮೃದುನುಡಿಯಲೊಡ।
ಬಡಿಸಿ ಕಡುಸೊಗಪಿತ್ತ ಮೃಡ ನಿಮ್ಮಡಿಗೆ ಪೊಡಮಡುವೆ ॥

ಗಂಧಸಿಂಧುರನಂದು ದಂದುಗ । ದಿಂದ ನೊಂದು ಮುಕುಂದ ಹರಿ ಗೋ ।
ವಿಂದ ರಕ್ಷಿಪುದೆಂದು ಮೊರೆಯಿಡಲೊಂದು ನಿಮಿಷದಲಿ ॥
ಬಂದು ನೆಗಳಿನು ಕೊಂದು ಪರಮಾ । ನಂದದಿಂದುದ್ಧರಿಸಿ ಬಕುತರ ।
ತಂದೆಯೆನಿಸುವ ದೇವ ನಿಮ್ಮಂಘ್ರಿಗೆ ನಮೋ ಎಂಬೆ ॥

## ಯಶೋಧರಸಾಂಗತ್ಯ ಸು. 1650.

ಸಂಧಿ 3, ಪದ್ಯ 338. ಇದರ ಕಥಾಸಾರವು ಪ್ರಥಮಸಂಪುಟದ (ತಿದ್ದಿದ ಮುದ್ರಣ) 332ನೆಯ ಪುಟದಲ್ಲಿ ಕೊಟ್ಟಿರುವಂತೆಯೇ.

ಸುರಪನ ವಜ್ರದ ಹತಿಗಂಜಿ ಗಿರಿಗಳು । ಪಿರಿದು ಬೇಗದೊಳೋಡಿಬಂದು ।
ಶರಣುಹೊಕ್ಕುವು ಮಾರಿದತ್ತನನೆಂಬಂತೆ । ಕರಿಗಳೊಪ್ಪಿದುವು ಪಾಜನಲಿ ॥

## ಜ್ಯೋತಿಷ (ಚಂಪು) ಸು. 1650.

ಪಶ್ಚಿಮದಿಶೆಯೊಳ್ ಕಂಪಿಸೆ । ನಿಶ್ಚಯ ಧರ್ಮಂಗಳೆಲ್ಲ ಕೆಡುವುದು ಲೋಕಂ ।
ಅಶ್ಚರಿ ಡಾಮಮಂ ಬಕರ್ಣಂ। ದುಶ್ಚರದೊಳ್ನಗರದುರ್ಗಕೆಡುವುದುನಿಜದಿಂ॥
ಬಿಲ್ಲು ಪರಿವೇಷಪಡುವಲ್ । ಸಿಲ್ಲದೆಪೂರ್ವಾದ್ರಿಯೆಡೆಗೆಪಡಿಸೂರ್ಯಂಗಳ್।
ಒಲ್ಲಿತ್ತಗ್ನಿಯ ಮಿಂಚದು । ಮುಲ್ಲಸದಿಂ ತೋಱೆದಿವಸ ಮಚೆಸಂಪೂರ್ಣಂ॥

## ನರಪಿಂಗಲಿಯ ನಿಮಿತ್ತ (ಗದ್ಯ) ಸು. 1650.

ಆನೆಮುಟ್ಟಲು ಅಮೃತಾನ್ನವನುಣ್ಬರು. ಕಾಗೆ ಮುಟ್ಟಲು ಯಮಲೋಕಕ್ಕೆ ಹೋಗುವರು—ಇತ್ಯಾದಿ.

## ಸಂವತ್ಸರಫಲ ಸು. 1650.

ಕಾಳಯುಕ್ತಿಸಂವತ್ಸರಕ್ಕೆ ಮಪೆಬೆಳೆ ಘನಮಕ್ಕು, ಸೈರಣೆ ಸಂತೋಷಮಕ್ಕು; ಬಡಗಲು....ತೆಲಗು ರಾಜ್ಯಕ್ಕೆ ರಾಜಭಯದಿಂದ ಕೇಡಕ್ಕು, ಮಿಕ್ಕ ದೇಶಕ್ಕೆ ಲೇಸಕ್ಕು.

## ಮೂರೇಳು ದೀಕ್ಷೆಯ ಪದ ಸು. 1650.

ವಾರ್ಧಕಷಟ್ಪದಿ; ಪದ್ಯ 21. ಆರಂಭದಲ್ಲಿ "ಗುರುಶಾಂತಮೂರ್ತಿ ಮೂರೇಳು ದೀಕ್ಷೆಯನಿಕ್ತ ತೆಱನ ಪೇಳ್ದಪೆನು" ಎಂದಿದೆ. ಒಂದೊಂದು ಪದ್ಯದಲ್ಲಿಯೂ ಒಂದೊಂದು ವಿಧವಾದ ದೀಕ್ಷೆ ವಿವರಿಸಿದೆ.

## ಭಿಕ್ಷಾಟನ ಚರಿತೆಯ ಟೀಕೆ. ಸು. 1650.

"ಭೂಮೀಶ್ವರನಾದ ಸತ್ಯಭಾಷಾಭೂಷಣನಾದ ಪ್ರತಾಪರಂಜಿತನಾದ ಭೂಲೋಕದೇವೇಂದ್ರ ಬಲ್ಲಾಳಪುರವರಾಧೀಶ್ವರ ಭೈರವಭೂಪಾಲನ ಭುಜಾದಂಡ ಶಿವಭಕ್ತಿವಾರ್ಧಿವರ್ಧನಪೂರ್ಣಚಂದ್ರ ಸೇನಾಧಿನಾಥ ಚಿಕ್ಕವೀರಭದ್ರಯ್ಯನು ಹೇಳಿಸಿದ ಭಿಕ್ಷಾಟನ ಚರಿತ್ರದ ವ್ಯಾಖ್ಯಾನ".

## ಭುವನಕೋಶ (ಗದ್ಯ) ಸು. 1650.

ಗುರುಬಸವಧರ್ಮರೂಪನ | ಪರಮೇಶ್ವರನಾದಿಯಲ್ಲಿ ತ್ರಿಜಗತ್ಸೃಷ್ಟಿಯ |
ವಿರಚಿಸಿದ ವಿಧವ ಕೇಳ್ದನು | ನೆಱೆಮುದದಿ ಸನತ್ಕುಮಾರ ನಂದೀಶ್ವರನಂ ||

## ಇಮ್ಮಡಿ ತಮ್ಮರಾಯ ಕೆಂಪರಾಯರ ಪದ. ಸು. 1650.

ಮಂಡಲಪತಿವೆಂಕಟರಾಯರ ಭುಜ | ದಂಡ ಸ್ವಾಮಿದ್ರೋಹರ ಗಂಡನೆನಿಪಕಾ |
ಲ್ಪೆಂಡೆಯುವನಿಟ್ಟ ಚಿಕರಾಯನೆನಿಸಿಯೆ | ಕೊಂಡು ಇಮ್ಮಡಿತಮ್ಮ ಭೂಪ ಸುಖದೊಳಿರ್ದ |

ಖಂಡೇಂದುಧರನೆಡೆಗೈದಲಾತನರಾಜ್ಯ | ಭಂಡಾರ ಬೊಕ್ಕಸವಧಿಕಾನೆಕುದುರೆಯ |
ತಂಡ ಮುಂತಾಗಿ ಎಲ್ಲವನು ಆ ಈ ಯಮಗೌಡ | ಲಂಡತನದೆ ಗ್ರಹಿಸಿ ದುರ್ಗಗಳ ಪ್ರ |
ಚಂಡತೆಯಿಂ ಬಲಿಸಿ ತಾನಲ್ಲದೆ | ಗಂಡುಗಲಿ ಇಲ್ಲೆನಿಸಿ ಇರಲದ |
ಕಂಡು ಕಡುಹುವೆರಸಿ ಆಕ್ಷಣದೆ ಮುಂ | ಕೊಂಡೆ ನೀ ರಾಜಕಾರ್ಯಕೆ ಮನವೆಳಸಿ |
ಎಲಹಂಕನಾಡಪ್ರಭುವೆಯ ಕೆಂಪರಾಯಾ ||

## ಭೋಜನರಗಳೆ ಸು. 1650.

ಅನ್ನವನಿಕ್ಕುವ ಪುಣ್ಯಾತ್ಮಕರನು | ವನ್ನಿಪುರದ ರಘುರಾಮು ರಕ್ಷಿಸಲಿ ||

## ಭಾರತ ಸಾವಿತ್ರಿ (ಗದ್ಯ) ಸು. 1650.

ಆರಂಭ—

ವೇದಾಂತದಲ್ಲಿ ನಿರ್ಣಯ | ಪಾದಂ ತಾನಂದಸುಗುಣನಿರ್ಗುಣದೊಳ್‍ಸಂ |
ಪಾದಿಸಿದ ವಿಮಲಹರಿಮಹಿ| ಮೋದಧಿಯಂ ಭೀಷ್ಮನರ್ಥಿಯಿಂ ಕೀರ್ತಿಸಿದಂ ||

## ಭಾಗವಂತಿಗೆ ಹಾಡು ಸು. 1650.

ಕ್ಷಿತಿಯೊಳು ಕುಂತಣವಿಷಯದೊಳೊಪ್ಪುವ | ಪ್ರತಿಕೊಪಣದ ಚಂದ್ರಪ್ರಭರ |
ಕೀರ್ತಿಯ ಕೀರ್ತನೆಯಭಿಷೇಕಕೆ ಮಾನಿನಿಯರೆ ಕೇಳಿ ಜಿನವಚನವನು ||

## ಶುಕಸಪ್ತತಿ ಸು. 1680.

ಭಾಮಿನೀಷಟ್ಪದಿ. ನಮಗೆ ದೊರೆತ ಅಸಮಗ್ರಪ್ರತಿಯುಲ್ಲಿ 38 ಸಂಧಿಗಳು (ಪದ್ಯ 1680) ಇವೆ. ಆರಂಭದಲ್ಲಿ ಗಣೇಶ, ಶಿವ, ವಿಷ್ಣು, ಬ್ರಹ್ಮ, ಪಾರ್ವತಿ, ಲಕ್ಷ್ಮಿ, ಸರಸ್ವತಿ, ಷಣ್ಮುಖ, ವೀರಭದ್ರ, ಸೂರ್ಯ ಇವರುಗಳ ಸ್ತುತಿ ಇದೆ.

ಉರಿಗೆ ತುಪ್ಪವ ಹಾಕಿದಷ್ಟಕೆ | ಮುರಳಿ ಹೇಗೆ ವಿಶೇಷವಹುದೋ |
ಹುರುಳುಗೆಡಿಸುವ ಕಾಮದೊಡನೆ ಮನಸ್ಸು ವಿಶ್ರಿಸಲು ||

ಭರದಿ ಪೆಚ್ಚುತ ಪೋಪುದಲ್ಲದೆ । ಪರಿಹರಕ್ಕವಕಾಶವಾವುದು ।
ಪರಮವೈರಾಗ್ಯದಲಿ ಮನವನು ನಿಲಿಸಬೇಕೆಂದ ॥
ಮನುಮಥನ ಸಿಂಗಾಡಿಯಂದದಿ । ಮಿನುಗುತಿರ್ಪುದು ಪುರ್ಬು ಕರ್ಣಗ ।
ಳನುಪಮಶ್ರೀಕಾರಕೆಣೆ ತುಟಿ ಹವಳವೆನಿಸುವುದು ॥
ವನಜನೇತ್ರೆಯ ಕೊರಳು ಶಂಖದ । ನೆಗಹಿಗೀಡಾಗಿಹುದು ಮಿಗೆ ಕಂ ।
ಪಿನ ಹೊಳಹ ಬೀಜವುವು ಪೊಳೆಗೊಂಡಿರ್ಪ ದಂತಗಳು ॥

೨೯7ನೆಯ ಪುಟದಲ್ಲಿ ಹೇಳಿರುವ ಶುಕಸಪ್ತತಿಯೂ ಇದೂ ಒಂದೇ ಗ್ರಂಥವಾಗಿದ್ದರೂ ಇರಬಹುದು.

## ಶ್ರೀರಂಗಮಾಹಾತ್ಮ್ಯ (ಚಂಪು) ಸು. 1680.

ಶ್ರೀರಮಣೀಯಕಾಯನತಿಶೀತಳಶೀಲಕೃಪಾಕಟಾಕ್ಷನಂ ।
ಭೋರುಹಸಂಭವಾನನಚತುಷ್ಟಯನಿಸ್ಸೃತಸನ್ನುತಿಪ್ರಿಯಂ ॥
ಚಾರುಫಣೀಂದ್ರಭೋಗಶಯನಂ ಗರುಡಧ್ವಜನತ್ಯಪೂರ್ವಶ್ರೃಂ ।
ಗಾರರಸಾಕರಂ ಸಲಹುಗೆಮ್ಮನತಿಪ್ರಿಯರಂಗನಾಯಕಂ ॥

## ಚಿಕ್ಕದೇವರಾಯಚೌಪದ ಸು. 1680.

ಮೈಸೂರು ದೊರೆಯಾದ ಚಿಕ್ಕದೇವರಾಯನ ಸ್ತುತಿರೂಪವಾಗಿದೆ.

ಅರಿರಾಯಗಿರಿವಜ್ರದಂಡನೆನಿಸುವನು ।
ಗರುವನಹ ದೇವರಾಜೇಂದ್ರನಾತ್ಮಜನು
ದೊರೆ ಚಿಕ್ಕದೇವರಾಜೇಂದ್ರನಿಷ್ಟವನು ।
ವರವಿತ್ತು ಲಕ್ಷ್ಮೀಯಾರಮಣ ರಕ್ಷಿಸನು ॥

## ಕೃಷ್ಣಾರ್ಜುನರ ಕಾಳಗ. 1685.

ಭಾಮಿನೀಷಟ್ಪದಿ; ಸಂಧಿ 30, ಪದ್ಯ 1825.

ಅರಜಿನಿಂದೀಕ್ಷಿತಿಯನಜುಹುವ । ಹದನ ಭವಪುರಸದನಲಕ್ಷ್ಮೀ ।
ವದನಚಂದಿರನೆನಿಪ ಗೋಪೀನಾಥನೊಲಪಿಂದ ॥

"ಗುರುಚಿದಾನಂದಾತ್ಮನಂಘ್ರಿಯಲಿ" ಎಂದು ಒಂದು ಕಡೆ ಹೇಳಿದೆ.

## ಮೌನೇಶ್ವರಬಾಲಲೀಲೆ ಸು. 1700.

ಭಾಮಿನೀಷಟ್ಪದಿ; ಅಧ್ಯಾಯ 6, ಪದ 30. ಆರಂಭದಲ್ಲಿ ಕಾಳಿ, ವಿಷ್ಣು, ಬ್ರಹ್ಮ, ಗಣೇಶ, ಸರಸ್ವತಿ ಇವರುಗಳ ಸ್ತುತಿ ಇದೆ. ವ್ಯಾಸ, ಮಲು

ಹಣ, ಹರಿಹರ, ನಿರಂಜನ, ಮಯೂರ, ಕಾಳಿದಾಸ, ಶುಕ ಈ ಕವಿಗಳ ಹೆಸರುಗಳು ಹೇಳಿವೆ. ಗ್ರಂಥದಲ್ಲಿ ಷೇಕ್, ಸೈಯದ್, ಪಟಾಣ್ ಎಂಬ ಹೆಸರುಗಳೂ ತುರುಕರ ಸಮಾಚಾರವೂ ಬರುತ್ತವೆ.

ಅಣುವಿನೊಳಗಣುವೆನಿಸಿ ತೋರ್ಪನೆ । ಗುಣನಿಧಿಯೆ ತನುವಿನೊಳು ತನುವಿನ ।
ಒಣಿಕೆಯಲಿ ಕಾಣಿಸುತಲಿಹನೆ ಮಹಾಪ್ರಮಾಣದಲಿ ॥
ಗಣಿಸಿ ನೋಡೆ ಮಹತ್ತೆನಿಸಿ ಸನ್ಮಣಿಯೊಳಿಹ ಗುಣದಂತೆ ಪೊಳೆಯು ।
ತ್ತಣಿಕೆಗಾಣಿದನಂತವೇ ಕೇಳೈಕ್ಯಪರಬ್ರಹ್ಮಾ ॥

## ಘಟ್ಟಿವಾಳಯ್ಯನ ಚರಿತೆ ಸು. 1700.

ವಾರ್ಧಕಷಟ್ಪದಿ; ನಮಗೆ ದೊರೆತ ಅಸಮಗ್ರಪ್ರತಿಯಲ್ಲಿ 3 ಸಂಧಿಗಳಿವೆ. ಆರಂಭದಲ್ಲಿ ಶಿವ, ಪಾರ್ವತಿ, ಗಣೇಶ, ವೀರಭದ್ರ, ಷಣ್ಮುಖ, ನಂದಿ, ಭೃಂಗಿ, ಚಂಡೇಶ್ವರ, ಮಹಾಕಾಳ ಇವರುಗಳ ಸ್ತುತಿ ಇದೆ. ಕವಿಯ ಗುರು ಚೆನ್ನಮಲ್ಲೇಶ.

ನಂಬಿದವರಂ ಸಿಂಬಿಯೆಂಬುವರ್ ಮನಮೆಚ್ಚಿ ।
ಹಂಬಲಿಸುವರ್ ಬಾಯೊಳಾತ್ಮದೊಳ್ ನಿಷ್ಕರುಣ ।
ವುಂಬ ಉಣುವಂಬರಕ್ಕಿಂಬು ತಪ್ಪಲ್ ಸುಯ್ದು ಕಂಬನಿಯಕಱೆಯುತ್ತಲಿ ॥
ಗುಂಭವೆಲ್ಲಂ ನೀಗಿ ಜೃಂಭಣದಿ ಸ್ವಾತ್ಮಪತಿ ।
ಯೆಂಬ ಭಾವನೆಬಿಟ್ಟು ಎಲೊಪಾಪಿ ಮೂಢನಂ ।
ನಂಬಿ ಈತೆಜನಾದೆ ನರೆ ಸೂರೆಯ ಪುರುಷರಾ ತಂಬುಲವ ತಿನ್ನೆಂಬರೈ ॥
ವಿಜಯನೆಂಬರ್ ಪ್ರಾಣವಿರ್ಪನ್ನೆಗಂ ಪತಿಯ ।
ಭಜನೆಗೈವರ್ ಉಣಿಸಿಯುಡಿಸಿಭೂಷಣಮಿಡಲ್ ।
ಸುಜನನೆಂಬರ್ ತಮ್ಮ ವರ್ತನೆಯ ಭಾವಿಸದೆ ಸುಮ್ಮನಿದಿರ್ನೋಡೆ ಹಿಗ್ಗುತೆ ॥
ಮಜರೆಯೆಂಬರ್ ಮಾಜುವುತ್ತರಕೆ ಕನಲದಿರೆ ।
ಕುಜನನೆಂಬರ್ ಸ್ವಯಂ ಕೈವಾಡಲ್ ಮುಪ್ಪು ।
ರುಜೆಯೊಂದೆ ಮುದಿಪಾಪಿಯುಜನೇಕೆನಿಲಿಸಿಹನೊತ್ಯಜಿಸೊಕಾಲನೆ ಎಂಬರೈ ॥
ದುರ್ಭವದ ಬಿತ್ತುಗಳ್ ಕೊರ್ಬುಳ್ಳ ಕತ್ತೆಗಳ್ ।
ಅರ್ಭಟದ ತೊತ್ತುಗಳ್ ನಿರ್ಭರದ ಕುತ್ತಗಳ್ ।

ಪರ್ಭಿದಘುಸುಕ್ತ್ರುಗಳ್ ತಪ್ಪಿರುವ ಮಿತ್ತುಗಳ್ ಸರ್ಬದುರ್ಗುಣ ಗೊತ್ತುಗಳ್ ||
ಉಬ್ಬಸದ ತಿತ್ತಿಗಳ್ ಹೇಬ್ಬುಳ್ಳ ತತ್ತಿಗಳ್ |
ಮಬ್ಬಿಡಿದ ಮೂರ್ತಿಯರ್ ಪರ್ಬಿದಪಕೀರ್ತಿಯರ್ |
ಪೆರ್ಬೇಟಕಾರ್ತಿಯರ್ ಗರ್ಭಸುಖಪೂರ್ತಿಯರ್ ಒಬ್ಬರೊಳಶವಲ್ಲ ಕೇಳ್ಳೈ ||

## ನಿರಾಳ ಗುರುಸ್ತೋತ್ರ. ಸು. 1700.

ಭಾಮಿನೀಷಟ್ಪದಿ; ಪದ್ಯ 25. ಹಲವು ಪದ್ಯಗಳು "ಗುರುವೆ ಶರಣಾರ್ತಿ" ಎಂದು ಮುಗಿಯುತ್ತವೆ.

ಒಡವನೆಡೆಯಾಡುತ್ತೆ ಭಾಗ್ಯವ | ನೆಡವ್ರುತಂ ಕಂಡಂತೆ ರೋಗಿಯು |
ತಡಕುತಿರ್ಪೋಷಧಿಯು ಲತೆ ಕಾಲ್ತೊಡರಿ ಕಾಣ್ಬಂತೆ ||
ಒಡಲ ಪಸಿವಂಡಳಿವವನು ಪಾ | ಲ್ಗಡಲನಿದಿರೊಳು ಕಂಡವೋಲೆ |
ನ್ನೊಡೆಯ ಶ್ರೀಗುರುದೇವರಂಘ್ರಿಯ ಕಂಡು ಒದುಕಿದೆನು ||
ಮನವೆ ಕ್ಷಣ ಪಾತಾಳಕೈದುಗು | ಮನವೆ ಕ್ಷಣದೊಳು ಗಗನಕೈದುಗು |
ಮನವೆ ಕ್ಷಣದೊಳಗಷ್ಟದೆಸೆಗಳ ಬಳಸಿ ಬಂದಿಹುದು ||
ಮನವನೊಬ್ಬುಳಿಮಾಡಿ ನಿಂದಡೆ | ಘನಕೆ ಘನ ಮಹಲಿಂಗವೆನುತದ |
ಅನುವನೆನ್ನೊಳು ತೋರಿ ಸಲಹಿದ ಗುರುವೆ ಶರಣಾರ್ತಿ ||

## ಮುಕ್ತಿರಾಮೇಶ್ವರಶತಕ ಸು. 1700.

"ಮುಕ್ತಿರಾಮೇಶ್ವರನೇ" ಎಂದು ಮುಗಿವ ಕೆಲವು ಕಂದಗಳು ದೊರೆಯುತ್ತವೆ. ಇವು ಆವುದಾದರೂ ಒಂದು ಶತಕಕ್ಕೆ ಸೇರಿದ್ದರೂ ಇರಬಹುದು.

ಹಾಪಿನ ಮೊಗದೊಳ್ ಸುಧೆಯಂ | ಭಾವೆಯಬೊಳ್ ಜೀವನೇಹಮಂ ನಂಬುಗೆಯಂ |
ಸೇವೆಯಲಿ ಸುಖಿಪನಜುಸವ | ಜೀವರು ಮರುಳುಗಳು ಮುಕ್ತಿರಾಮೇಶ್ವರನೇ ||
ಜೀವದಚಿಪೆಂಬುದದನೇ | ಸಾವೆಂದುಂಡುವರು ಮನುಜರದು ಸಾವಲ್ಲಂ |
ಸಾವೆಂಬುದಾವ್ರುದ್ಯೈ ಪರ | ಸೇವೆಯೆ ನಿಮ್ಮಾಣೆ ಮುಕ್ತಿರಾಮೇಶ್ವರನೇ ||

ಶಿವಾಷ್ಟಕ ಸು. 1700.

ಆಕಾಶಕೇಶಂ ಶಿರಪಾತ್ರಗೇಯುಂ ಲೋಕಾದಿವಂದ್ಯಂ ನಿಜಭಕ್ತಕಾಯಂ ।
ಏಕಾಕ್ಷರಂ ಪೀತಧರಾಬ್ಜದೇಹಂ ಸಾಕಾರದಿಂದೆನ್ನ ಕರಕ್ಕೆಬಂದಂ ॥

ಮಹಿಮಾಷ್ಟಕ ಸು. 1700.

ಆವಂಗೆ ವಿಷ್ಣು ಭಕ್ತನು । ಆವಂ ತಾಸೇದ್ರವಂದ್ಯ ಬ್ರಹ್ಮಸ್ತುತನುಂ ।
ಆವಂಗೆ ಸುರರ ಓಲಗ । ದೇವಶಿರೂಪಾಕ್ಷ ಗಲ್ಲದುಟಿ'ದಗ್ಗ್ಗಂಪೇ ॥

ಅಕ್ಷರಮಾಲಿಕೆ. ಸು. 1700.

ಕಂದ ೫೮; ಪ್ರತಿಕಂದವೂ "ಗರಳಪುರೀಶಾ" ಎಂದು ಮುಗಿಯುತ್ತದೆ. ಅಕಾರದಿಂದ ಹಕಾರದವರೆಗೆ ಇವೆ.

ನಾನೆಂಬ ಹಮ್ಮಿನಿಂದವೆ ! ನಾನಾಸುಕೃತಗಳ ನೀಗಿ ದುಷ್ಕರ್ಮಗಳಂ ।
ತಾನಾರ್ಜಿಸುತ್ತೆ ಕೆಡುವರು । ದೀನರು ತ್ರೈಜಗದಧೀಶ ಗರಳಪುರೀಶಾ ॥

ಅಲ್ಲಮಪ್ರಭುವಿನಷ್ಟಕ ಸು. 1700.

ಶ್ರೀರಮಣನಿಂದ್ರಾದಿವಂದಿತಚರಣನಂ ಶುಭಕರಣನಂ ।
ಮಾರಮದಸಂಹಾರ ನಿರ್ಮಲಮಾರನಂ ಸುಶರೀರನಂ ॥
ಕಾರುಣಿಕಮಾಹಾತ್ಮ್ಯನುತಜಗಪಾಲನಂ ದಯಶೀಲನಂ ।
ಧೀರಗುಣ ಗಂಭೀರನಲ್ಲಮದೇವನಂ ಸುಖಜೀವನಂ ॥

ನರಹರಿಭಕ್ತಿಸಾರ ಸು. 1700.

ಭಾಮಿನೀಷಟ್ಪದಿ; ಪದ್ಯ 108. ಕರಿಗಿರಿಯ (ದೇವರಾಯದುರ್ಗದ) ನರಹರಿಯ ಅಂಕಿತವಿದೆ. ಪ್ರಾಣೇಶಶತಕದಲ್ಲಿಯೂ ಇದೇ ಅಂಕಿತವಿರುವುದರಿಂದ ಆ ಗ್ರಂಥವನ್ನೂ ಈ ಗ್ರಂಥಕರ್ತನೇ ಮಾಡಿರಬಹುದು.

ಬಿಲ್ಲಹಬ್ಬಕೆ ನಲ್ಲಕೃಷ್ಣನ । ಖುಲ್ಲಕಂಸನು ಕರಸೆ ಗೋಕುಲ ।
ದಲ್ಲಿ ಬೞಿಕೆಲ್ಲರನು ಸಂತೈಸಗ್ರಜನು ಸಹಿತ ॥
ನಲ್ಲಲಿತಪುರದೊಳು ಕುಬುಜೆಯ । ಚೆಲ್ವ ರಕ್ಷಿಸಿ ಬಿಲ್ಲಬಱಿಕೈ ।
ದಲ್ಲಿ ಮಲ್ಲರ ಕೊಂದ ನರಹರಿ ರಕ್ಷಿಸನವರತ ॥

## ಪ್ರಾಣೇಶಶತಕ.

ಥರೆಯ ಸುರುಳಿಯ ಸುತ್ತಿಕಕ್ಷದೊ | ಳಿಱುಕಿ ಜಾಱುವ ದುರುಳದೈತ್ಯನ |
ತರಣಿಸಾಸಿರಕಿರಣಲಹರಿಯ ನಿಶಿತದಾಡೆಯೊಳು ||
ಇಱಿದು ಧರಣಿಯ ತಂದು ಹರಹಿದ | ಸುರರ ಪಾಲಕ ರಿಪುಕುಲಾಂತಕ |
ದುರಿತದೂರ ವರಾಹಮೂರ್ತಿಯ ತೋಱೊ ಪ್ರಾಣೇಶಾ||

## ಧರ್ಮವ್ಯಾಧೋಪಾಖ್ಯಾನ ಸು. 1700.

ಭಾಮಿನೀಷಟ್ಪದಿಯಲ್ಲಿ ಬರೆದಿದೆ. ಆರಂಭದಲ್ಲಿ ಗಣೇಶ, ಸರಸ್ವತಿ, ಕೃಷ್ಣ, ಈಶ್ವರ, ಪಾರ್ವತಿ, ವ್ಯಾಸ ಇವರುಗಳ ಸ್ತುತಿ ಇದೆ.

ಸರಸಕಲ್ಪನವೀಚಿವಿಸರದೆ | ಮೆಱೆವ ನಿಜಹೃದಯಾಂಬುನಿಧಿಯೋ |
ವರಿಯೊಳು ವಿಜ್ಞಾನವೆಂಬ ಗಭೀರಮಂಥನದೆ ||
ಪರಮಭಾರತವೆಂಬ ಸುಧೆಯಂ | ಭರದೆ ತೆಗೆದೀಜಗತಿಗರ್ಪಿಸಿ |
ಹರಿಸವೊಂದಿಸಿ ಜಸದಿನೆಸೆವಾವ್ಯಾಸಮುನಿ ಪೊರೆಗೆ ||
ನೆಲದೆ ಪಾತಿವ್ರತ್ಯಮಹಿಮೆಯ | ನಲಘುಜನನೀಜನಕಸೇವಾ |
ಫಲಮನಱಿಯಿಪ ಧರ್ಮಸಾರದ ಮಹಿತಭಾರತದ ||
ಲಲಿತಧರ್ಮವ್ಯಾಧಕಥೆಯನು | ಸುಲಭವೆನೆ ಕನ್ನಡದ ನುಡಿಗಳಿ |
ನೊಲಿದು ನುಡಿವೆಂ ಭಾಮಿನೀಷಟ್ಪದಿಯ ವೃತ್ತದೊಳು ||

## ಆಸ್ಥಾನಜ್ಯೋತಿ (ಕಂದ 130) ಸು. 1700.

ಖುಲ್ಲರಕುಹಕರಕದನಕೆ | ನಿಲ್ಲದೆಹರಿವವರಕೊಂಡೆಯರ ದುರ್ಜನರಂ |
ಒಳ್ಳಿದರೆಂದುಂ ಸಲಹಲು ! ಹಲ್ಲುಂಹದಿನಾಱುಹೋಹುದೆಂಬುದನಱಿಯಾ ||
ಬಡತನದಲಿಬಂಧುಗಳಿ | ಪ್ಪೆಡೆಯುಂ ಹೊಕ್ಕಿರ್ದು ಅಲ್ಲಿ ನಗೆಗೆಡೆಯಾಗದೆ |
ಅಡವಿಯ ಸೊಪ್ಪಂ ತಿನ್ನು | ತ್ತೊಡಲಂಹೊರೆದಿಪ್ಪಸುಖಕೆಕಡೆಪೊದಲಿಲ್ಲಂ||

## ಪಾಂಡವರ ಚರಿತ್ರೆ ಸು. 1700.

ಹಾಡಿನಂತೆ ಕಾಣುತ್ತದೆ : ಸಂಧಿ 5, ಪದ 571. ಒಂದೊಂದು ನುಡಿಯೂ "ಶ್ರೀ ಜಾನಕೀವಲ್ಲಭಾ" ಎಂದು ಮುಗಿಯುತ್ತದೆ. ತಟ್ಟೆಯಕೆರೆಯ ರಂಗನ ಅಂಕಿತವಿದೆ. ಅರಂಭದಲ್ಲಿ ವಿಷ್ಣು, ಶಿವ, ಸರಸ್ವತಿ, ಗಣೇಶ ಇವರುಗಳ ಸ್ತುತಿ ಇದೆ.

ಕೇಳು ಕೇಳೆಲೊ ಕುಹಕ ಖಳ ಎನ್ನ ವಲ್ಲಭರು ।
ಕೇಳಿದರೆ ಬಿಡರು ನಿನ್ನ । ಮುನ್ನ ।
ಸದೆದುಸೀಳಿಬಿಡುವರುಬೇಡಕಾಣೊ। ಸಾರಿಹೇಳಿ'ದೆನುಕೆಡಬೇಡಮಾಣೊ ।
ಅಂತ್ಯಕಾಲಕೊದಗಿದ ಬುದ್ಧಿಯೇನೊ ।
ಪಾಪಿಬಯಲಾಸೆಗಾಗಸುವಳಿ'ಯದಿರೆಂದೆಂಬ ।
ಬಾಲಕಿಯೊಳಿಂತೆಂದನು । ತಾನು । ಶ್ರೀಜಾನಕೀವಲ್ಲಭಾ ॥
ಬಡಪಾಂಡವರನಡವಿಗೋಡಿಸಿದೆನೆಂದು ಎ ।
ನ್ನೊಡನೆ ಕೆಣಕಿದನೆ ಬಂದು । ಇಂದು ।
ಅಯ್ಯ ತೊಡೆವೆನಾತನ ಹಣೆಯಲಿಪಿಯ । ನೃಪನಪಡೆಯನಿಕ್ಕುವೆನು ರಣ
ಬಲಿಯ ।
ಅವನ ಮಡದಿಮಕ್ಕಳ ತಹೆನು ಸೆರೆಯ ।
ನೆಂದು ಕಡುಗವನು ಜಡಿದು ಕಮಲಾಕ್ಷಿಯರ ಮುಖನೋಡಿ ।
ಕುಡಿಮೀಸೆಯನು ತಿರುಹಿದ । ಉತ್ತರ । ಶ್ರೀಜಾನಕೀವಲ್ಲಭಾ ॥

ಕಾವ್ಯಸಾರ (ಪದ್ಯ 225) ಸು. 1700.

ಇಂಬಿಂ ನಾಟ್ಯಮನಾಡೆ ಕಾಂತೆಯುಮೊಗಂ ತತ್ಕಾಲದೊಳ್ ತೋರ್ಪುದಾ।
ಜಂಬೂವಜ್ಜಲಬಿಂದುವಜ್ಜಲಜವಜ್ಜಂಬಾಳವಜ್ಜಾಲವತ್ ॥
ಇಂಬಾಗಿರ್ದ ಸುವೇಣಿಗಾಸರವದಿಂ ಮಧ್ಯಸ್ತನಾಪಾಂಗದಿಂ ।
ಜಂಬೂವಜ್ಜಲಬಿಂದುವಜ್ಜಲಜವಜ್ಜಂಬಾಳವಜ್ಜಾಲವತ್ ॥
ಕೈಸನ್ನೆದೋಱೆ ಚೆಲ್ವಿನ । ವೈಸಿರಿಯುಂ ಪೇಱೆ ವೈಸಿಕದೆ ವಿಟರಸುವಂ ।
ಕೈಸೆಱೆಗೊಳುತ್ತೆರಂಜಿಪು । ದೈಸರಳನ ಪಿಡಿಯುತೆಱದೆ ಗಣಿಕಾನಿಕರಂ ॥
ತಿಱಿಕಲ್ಲಾಡುವಳಷ್ಟಶೈಲಕುಲಮಂ ದಿಗ್ದಂತಿದಂತಂಗಳಂ ।
ನಿಱಿಕೈಯಿಕ್ಕಲೆದಾಡುವಳ್ ಮುಗಿಲಪೂವಂ ಸೂಡುವಳ್ ತಾರೆಯಂ ॥
ತಿಱಿವಳ್ ತುತ್ತುಗಳೆಂದು ಚಂದ್ರರವಿಯುಂ ಕಂಡೋಲೆಯೆಂದಿಕ್ಕುವಳ್ ।
ಸಿಱಿಯುಂ ಸುತ್ತುವಳೇಱುವಾರ್ಧಿಚಯಮಂ ಶ್ರೀಕೀರ್ತಿರೇಖಾಂಕನಾ ॥
ನಂಬಿದವನಿವಂ ತನ್ನಂ । ನಂಬದೆ ಹಿಂಗಿರುವ ಮನುಜನಿವನೆಂದಱಿದುಂ ।
ಇಂಬಱಿದು ಸಲಹದರಸಿನ । ಡೊಂಬಾಟಕೆ ಮನವನಿತ್ತು ಕೆಡದಿರು
ಮನುಜಾ ॥

ಲೆಕ್ಕದ ಚೌಪದ. ಸು. 1700.

ಗಿಣಿ ಗಿಡುಗ ಗಿಡವೊಂದಱಿಂ ಪಾಱುವಾಗ ।
ಗಿಣಿ ಕ್ಷಣಕೆ ಶತಕ್ರೋಶವನು ಪೋಗೆ ಬೇಗ ।
ಕ್ಷಣಕೆಯೊಂದೊಂದ ಹೆಚ್ಚುತ ಪೋಗಿ ಗಿಡುಗ ।
ಗಿಣಿವಿಡಿವುದೆನಿತುದಿನಕೆಂದು ನುಡಿ ಬೆಡಗ ॥
ಹಡಗು ಮೂಱನು ಕೊಂಡು ಹೋಹ ಮಾರ್ಗದಲಿ ।
ಯೊಡಲೊಳಿಡಿದೊಡವೆ ಭರವಾಯ್ತೊಂದಕಲ್ಲಿ ।
ಮಡಿದೆರಡಕವರನಿತ ಕೊಡುತ ಬರಲಲ್ಲಿ ।
ಕಡೆಗೆ ಮೂಹಸುಗೆಯಲಿ ಸಮಮೂಱು ಸೊಲ್ಲಿ ॥
ಕಾಲಾಱು ಕಣ್ಣಾಱು ಬಾಲವೆರಡೇನು ।
ಜೋಲುವಾಕಿವಿ ನಾಲ್ಕು ತಲೆಮೂಱದೇನು ।
ನಾಲಗೆಯು ನಾಲ್ಕು ಕೈ ನಾಲ್ಕಂತದೇನು ।
ಬಾಲಭಾಷೆಗಳಲ್ಲ ನುಡಿ ನಿಜವದೇನು ॥
(ಹೊಟ್ಟೆಗೆ ಹಾವಸುತ್ತಿ ಮೂಷಕವನೇರಿದ ವಿಘ್ನೇಶ)
ಮರದಿಂದ ಮುಱಿದು ಬಿದ್ದನ ಹಿಡಿದು ತಂದು ।
ಭರದಿಂದಲಾಕ್ಷಣದಿ ಚರ್ಮವನು ಸುಲಿದು ।
ಅರೆಬೆಂದು ನೊಂದವನನಂಗಡಿಗೆ ತಂದು ।
ಸರಸಜನರಾ ಕೈಗೆ ಬಾಯ್ಗೆ ಬರಲೆಂದು ॥
(ಅಡಕೆ)

ಬಿಳಿಗಿಯರಸರ ವಂಶಾವಳಿ (ಚಂಪು) ಸು 17ಂ0.

ಐಸೂರುಪಟ್ಟಣವನಾಳಿದ ಅಂಡಣ್ಣನಿಂದ ಬಸವಭೂಪಾಲನವರೆಗೆ ದೊರೆಗಳ ಚರಿತೆ ಹೇಳಿದೆ.

ಪರಮಬಲವಂತಧರಣೀ । ಶ್ವರಚೂಡಾರತ್ನ ಬಸವಭೂಪನಕೊರಲೊಳ್ ।
ಮಿಱುಗಲ್ ಮುಕ್ತಾಹಾರಂ। ಪರನರಪಗ್ರಾಮ್ಯಾಯ್ತು ನಿತ್ಯಮುಕ್ತಾಹಾರಂ ॥
ಕಂದನ ಮುದ್ದಿನಂತೆ ಕಡುಪೂತಿಹ ಚಂಪಕವೃಕ್ಷದಂತೆ ಮಾ ।
ಕಂದದ ಪಣ್ಗಳಂತೆ ವ್ಯಧುವಿಶ್ರಿತಶರ್ಕರೆಯೂಟದಂತೆ ಪೂ ॥

ರ್ಗೇಂದುಗಭಸ್ತಿಯಂತೆ ಯೆಳದೆಂಗಿನ ಪಾಲ್ಗುಡಿದಂತೆ ರಂಜಿಕುಂ |
ಮಂದರ ಸುಸ್ವರೋಕ್ತ ಬಸವವೇಂದ್ರ ಸುಧಾಮಯ ವಾಕ್ಯದೀಪ್ತಿಗ ಕಾಂ||

ರಾತ್ರಿಯ ನಲ್ಲನ ಪದ್ಯ (ಕಂದ 120) ಸು. 1700.

ವೃಗಧರನ ಹಗೆಯ ವೈರಿಯ | ಹೆಗಲೇಱರ್ಪವನ ಮಗನ ವೈರಿಯ ಗಿರಿಯಂ |
ನೆಗಪಿದನ ಪಗೆಯ ಭೃತ್ಯನ | ನಗೆವೊಗಮಂ ಪೋಲ್ತನಕ್ಕ ರಾತ್ರಿಯ ನಲ್ಲಂ |
(ಹನುಮಂತ)
ಒಂದೆರಡು ಪಥದಿ ನಡೆವಾ | ಸುಂದರಿಯಾತ್ಮಜನ ಪಿತನ ಮೋಹದ ಸುತನಂ |
ಎಂದೆಂದಿಗಗಲದಿರ್ಪವ | ನಂದವ ನೆಱೆ ಪೋಲ್ತನಕ್ಕ ರಾತ್ರಿಯ ನಲ್ಲಂ ||
(ಇಲಿ)

ಪಾರ್ಶ್ವತೀರ್ಥಂಕರರ ಪಂಚಕಲ್ಯಾಣ. ಸು. 1700.

ಭಾಮಿನೀಷಟ್ಪದಿ, ವಚನ ಇವುಗಳನ್ನು ಒಳಕೊಂಡಿದೆ. ಪ್ರಥಮಪದ್ಯ—
ಸರ್ವಗುಣದೊಳು ಜಿನನು ಹಿರಿವುದು | ಸರ್ವರೇಳು ರತ್ನತ್ರಯಂಗಳು |
ಉರ್ವಿಯೊಳು ಬಱಿಕುಂಟೆ ಗುಣಿಗಳು ಪಿಡಿವ ವಸ್ತುಗಳು ||
. . ತಿರಲದು ವನದೊಳುಯ್ಯಲ | ಸರ್ವಶೌರ್ಯತ್ರಿಕಸಮೇತದಿ |
ನುರ್ವಿಪತಿ ಜಿನದತ್ತನಾಡಿದ ಸರ್ವರೋಲೈಸೆ ||

ಕೊನೆಯ ವಚನ—ಈ ಪಿಧಿವೆ. ಪೆದು ಮುಕ್ತಿಗೆ ಸಂನ ಶ್ರೀಪಾರ್ಶ್ವದೇವರ ಯಕ್ಷಧರಣೇಂದ್ರನರಸಿ ದೇಪಿಪದ್ಮಾವತಿಯ ವರಪುತ್ರ ಜಿನದತ್ತ ತ್ರಿವಿಧೈಶ್ವರ್ಯದಿಂ ಸುಖಿಮಿರ್ದನಂದು.

ಲೋಕಸ್ವರೂಪ (ಕಂದ 21) ಸು. 1700.

ಆಕಾಶಮಧ್ಯದಲ್ಲಿಹ | ಲೋಕಂ ಪದಿನಾಲ್ಕು ರಜ್ಜುವಗಲಮದೇಱುಂ |
ಏಕಂ ಪಂಚಕಮೊಂದೆನೆ | ಯಾಕಾರಂ ವಾಯುತ್ರಯದಿನೊಪ್ಪುಗೆ ಲೋಕಂ |

